# ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವ

## ವಜ್ರ ಮಹೋತ್ಸವ ಪ್ರತಿಷ್ಠಾನ

ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ.

ಶ್ರೀ ಸಿದ್ಧಗಂಗಾ ಮಠದ ಇತಿಹಾಸದಲ್ಲಿ ಧಾರ್ಮಿಕವಾಗಿ, ಶೈಕ್ಷಣಿಕವಾಗಿ, ಸಾಂಸ್ಕೃತಿ ವಾಗಿ, ಆಧ್ಯಾತ್ಮಿಕವಾಗಿ ಬೆಳಕಿನ ಯುಗವನ್ನು ನಿರ್ಮಾಣ ಮಾಡಿದ ಕಾರಣಿಕಪುರು ತ್ರಿವಿಧ ದಾಸೋಹ ಮೂರ್ತಿಗಳಾದ ಪ. ಪೂ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ

‡ 1930 ರಲ್ಲಿ ಪರಮ ಪೂಜ್ಯ ಉದ್ದಾನ ಶಿವಯೋಗಿಗಳ ಕರಕಮಲ ಸಂಜಾತರಾ ಶ್ರೀ ಮಠದ ಸೇವಾ ಕೈಂಕರ್ಯಗಳನ್ನು ಸಾಗರದಷ್ಟು ವಿಸ್ತರಿಸಿದ್ದಾರೆ.

‡ ಪೂಜ್ಯರು ಭಾರತೀಯ ಸಂಸ್ಕೃತಿಯ ಸಾಕಾರ ಮೂರ್ತಿಗಳು. ಮಾನವೀಯತೆಯ ಮಂಗಳಕಾರರು. ಅಪೂರ್ವ ರಾಷ್ಟ್ರ ಚಿಂತಕರು.

‡ ಶ್ರೀಗಳವರ ಸೇವಾ ಮಹಿಮೆಯನ್ನು ಕೃತಜ್ಞತೆಯಿಂದ ಸ್ಮರಿಸಿದ ನಾಡಿನ ಭಕ್ತಾದಿ ಗಳು, ಹಳೆಯ ವಿದ್ಯಾರ್ಥಿಗಳು ಇದೀಗ ವಜ್ರ ಮಹೋತ್ಸವ ಆಚರಿಸುವ ಉತ್ಸಾಹ ದಲ್ಲಿದ್ದಾರೆ, ಶ್ರೀ ಶ್ರೀ ಗಳ ಮೇರು ಸಾಧನೆಗಳನ್ನು ಪ್ರತಿಬಿಂಬಿಸುವ, ಪ್ರಸ್ತು ಶ್ರೀ ಮಠಕ್ಕೆ ಅಗತ್ಯ ಸೌಲಭ್ಯಗಳನ್ನು ಪೂರೈಸುವ ಸ್ಮಾರಕಗಳನ್ನು 5 ಕೋಟಿ ರೂ. ವೆಚ್ಚದಲ್ಲಿ ನಿರ್ಮಿಸಲಾಗುತ್ತಿದೆ.

‡ **ಭವ್ಯ ದಿವ್ಯ ಬೃಹತ್ ಪ್ರಸಾದ ನಿಲಯ.**

‡ **ಸುಸಜ್ಜಿತ ಆಧುನಿಕ ಬೃಹತ್ ವಿದ್ಯಾರ್ಥಿನಿಲಯ.**

‡ **ಆಧುನಿಕ ನೈರ್ಮಲ್ಯ ಮತ್ತು ನೀರು ಸರಬರಾಜು ವ್ಯವಸ್ಥೆ.**

ಇವುಗಳ ಅರ್ಧಭಾಗದಷ್ಟು ಕೆಲಸ ಕಾರ್ಯಗಳು ಮುಗಿದಿದ್ದು ಪೂರ್ಣವಾಗಲು ಇನ್ನು 2 ಕೋಟಿ ರೂ ಗಳು ಬೇಕಾಗಿವೆ. ಶ್ರೀ ಶ್ರೀ ಗಳವರ ಸೇವಾ ಸಾಗರ ಸ್ಮರಣಾರ್ಹ ಪುಣ್ಯಕಾರ್ಯಕ್ಕೆ ನಾಡಿನ ಭಕ್ತಾದಿಗಳು, ಅಭಿಮಾನಿಗಳು, ಮತ್ತು ಹಳೆಯ ವಿದ್ಯಾರ್ಥಿಗಳು ಕಾಣಿಕೆ ನೀಡುವುದರ ಮೂಲಕ ವಜ್ರ ಮಹೋತ್ಸವ ಯೋಜನೆಗಳು ಯಶಸ್ವಿಯಾಗಲು ಸಹಕರಿಸಬೇಕಾಗಿ ಪ್ರಾರ್ಥಿಸುತ್ತೇವೆ.

ವಿ. ಸೂ :– ನಿರ್ಮಾಣ ಹಂತದಲ್ಲಿರುವ ಪ್ರತಿಷ್ಠಾನ ಭವ್ಯ ಸ್ಮಾರಕಗಳ ಚಿತ್ರಗಳನ್ನು ಹಿಂಬದಿ ಪುಟದಲ್ಲಿ ನೋಡಿ.

**ಪದ್ಮಭೂಷಣ ಡಾ. ಎಂ.ಸಿ. ಮೋದಿ,** ಅಧ್ಯಕ್ಷರು

**ಬಿ.ಎಸ್. ಮುದ್ದಪ್ಪ** ಐ.ಎ.ಎಸ್.(ನಿ) ಕಾರ್ಯಾಧ್ಯಕ್ಷರು

**ಎಸ್. ಎಸ್. ಹಸಬಿ,** ಐ.ಪಿ.ಎಸ್. (ರಿ).
ಕಾರ್ಯದರ್ಶಿಗಳು

# ಸಿದ್ಧಗಂಗಾ

ಸಂಪುಟ-31 ಸಂಚಿಕೆ-7 ಜುಲೈ-1995.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ತುಂಬಿ ತುಳುಕಿದಿರಯ್ಯ ಸಾವಿರದ ಎದೆಯೊಳಗೆ
ನಂಬಿ ನಡೆಸಿದಿರಯ್ಯ ಕೈಹಿಡಿದು । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

ಶಿವಪೂಜೆಯ ಸಾಕಾರ ದಾಸೋಹದ ಶ್ರೀ ತೇಜ
ಕಾಯಕದ ಕಾರುಣ್ಯವೆ ಶ್ರೀ ಗುರವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

§ § §

ಬಸವ ತೀರ್ಥದಿಮಿಂದ ಜಂಗಮ ಪುಂಗವೆ
ಹಸನಾದ ಶಿವಬೆಳಕ ಚೆಲ್ಲಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

--ಹೆಚ್. ವಿ. ವೀರಭದ್ರಯ್ಯ

# ಶ್ರೀ ವಾಣಿ



ಜಗತ್ತು ಆದಾಯದ ಅಂಚಿನಲ್ಲಿದೆ. ಹಣ, ಆರ್ಥಿಕ, ಭೋಗ ಜೀವನಕ್ಕೆ ಮನುಷ್ಯ ಆಕರ್ಷಿತನಾಗಿದ್ದಾನೆ. ಜೀವನದ ಮೌಲ್ಯಗಳನ್ನು ಕಡೆಗಣಿಸಿದ್ದಾನೆ. ಮಾನವೀಯ ಬಾಂಧವ್ಯವೆಂಬುದು ಬತ್ತಿಹೋಗಿದೆ. ಮೃಗೀಯ ಭಾವನೆಗಳು ತಾಂಡವವಾಡುತ್ತಿವೆ. ಅದರಲ್ಲೂ ಕಲಿತ ಯುವಜನಾಂಗ ಗಂಭೀರ ಚಿಂತನೆಯನ್ನೇ ಕಳೆದುಕೊಂಡಿದ್ದಾರೆ. ವೈಯಕ್ತಿಕ ಸುಖಕ್ಕಾಗಿ ಏನುಬೇಕಾದರೂ ಮಾಡಲು ಸಿದ್ಧನಾಗಿದ್ದಾನೆ. ವ್ಯಕ್ತಿ, ಕುಟುಂಬ, ಸಮಾಜ, ರಾಷ್ಟ್ರಗಳ ಮಹತ್ವವನ್ನು ಅರಿತಿಲ್ಲ. ಇತಿಹಾಸ ಪ್ರಜ್ಞೆಯಂತೂ ಇಲ್ಲವೇ ಇಲ್ಲ. ಹತಾಶ ಪರಿಸ್ಥಿತಿ ನಿರ್ಮಾಣದಲ್ಲಿ ಎಲ್ಲರೂ ತೊಡಗಿದ್ದಾರೆ. ಕೆಲಸ, ದುಡಿಮೆ, ಶ್ರಮಜೀವನ ಯಾರಿಗೂ ಬೇಕಿಲ್ಲ. ಸುಲಭೋಪಾಯದ ಮಾರ್ಗಾನ್ವೇಷಣೆ ಎಲ್ಲೆಲ್ಲೂ ಕಂಡುಬರುತ್ತಿದೆ. ಕಷ್ಟದ ಕೆಲಸ ಶ್ರಮದ ದುಡಿಮೆ ಮನುಷನಿಗೆ ಸದ್ಗುಣಗಳನ್ನು ಕಲಿಸುತ್ತದೆ. ಪ್ರಾಮಾಣಿಕತೆಯನ್ನು ತಂದುಕೊಡುತ್ತದೆ. ಬೇರೆಯವರನ್ನು ಗೌರವಿಸುವಂತೆ ಮಾಡುತ್ತದೆ. ರಾಷ್ಟ್ರನಿರ್ಮಾಣಕ್ಕೆ ಇಂದು ಅಗತವಾಗಿ ಬೇಕಾಗಿರುವುದು ನಿಸ್ವಾರ್ಥ ದುಡಿಮೆ. ಮುಖಂಡರಲ್ಲಂತೂ ಇದು ಕಾಣಬರುತ್ತಿಲ್ಲ. ಅನುಯಾಯಿಗಳು ಐಷಾರಾಮಿಗಳು, ಭಾರತದಂಥ ರಾಷ್ಟ್ರಕ್ಕೆ ಪಂಚತಾರಾ ಹೋಟೆಲ್ಲುಗಳ, ಕೇಬಲ್ ಟಿ. ವಿ. ಗಳ ಸಂಸ್ಕೃತಿ ಒಗ್ಗುವಂಥದಲ್ಲ. ಯುವಜನತೆ, ಹೆಣ್ಣುಮಕ್ಕಳು ಇಂದು ಇವುಗಳ ಬೆನ್ನುಹತ್ತಿದ್ದಾರೆ.

ಭವಿಷ್ಯ ಕತ್ತಲೆಯತ್ತ ಧಾವಿಸುತ್ತಿದೆ. ಭಾರತೀಯ ಸಂಸ್ಕೃತಿಯ ಶ್ರೇಷ್ಠ

ಮೌಲ್ಯಗಳೆಲ್ಲ ಮಣ್ಣುಗೂಡುತ್ತಿವೆ. ದಿನಗಳು ಉರುಳಿದಂತೆ ಅಪಾಯದ ಪ್ರಪಾತದ ಕಡೆಗೆ ದೇಶ ಸಾಗುತ್ತಿದೆ. ಜನನಾಯಕರ ಜೀವನ ವೈಯಕ್ತಿಕ ಚಾರಿತ್ರ ಆದರ್ಶ ಪೂರ್ಣವಾಗಿಲ್ಲ. ಅಧಿಕಾರದ ಅಮಲಿನಲ್ಲಿ ವಾಸ್ತವಿಕ ಪರಿಸ್ಥಿತಿಯನ್ನು ಅರಿಯ ಲಾರದವರಾಗಿದ್ದಾರೆ. ಭ್ರಮಾತ್ಮಕ ಲೋಕಸೃಷ್ಟಿಯಲ್ಲಿ ಎಲ್ಲರನ್ನೂ ಮರುಳು ಮಾಡುತ್ತಿದ್ದಾರೆ. ಜನಶಕ್ತಿಯ ಅಪವಯವನ್ನು ಗಣನೆಗೆ ತಂದುಕೊಳ್ಳುತ್ತಿಲ್ಲ. ಮಾನವ ಸಂಪನ್ಮೂಲಗಳ ಆಳ-ಅಗಲಗಳ ನೈಜ ಅಧ್ಯಯನ ನಡೆದಿಲ್ಲ. ನಾಗ ರಿಕತೆಯ ಹೆಸರಿನಲ್ಲಿ ವಿಕಾರ, ವಿಕೃತಿಗಳು ವಿಜೃಂಭಿಸಿವೆ. ಧರ್ಮ ಸಂಸ್ಥೆ ಗಳನ್ನು ಟೀಕಿಸುವ ಪ್ರವೃತ್ತಿ ಹೆಚ್ಚಾಗಿದೆ. ಧರ್ಮದ ನಿಜವಾದ ಉದ್ದೇಶ ಗುರಿ, ಪರಿಪೂರ್ಣ ಮಾನವನ ನಿರ್ಮಾಣ. ಧರ್ಮಾಚರಣೆಯ ದೋಷಗಳನ್ನೇ ಎತ್ತಿ ಹಿಡಿದು ಇಡೀ ಧರ್ಮವನ್ನೇದೂಷಿಸುವ ಪರಿಪಾಠ ಅಪೇಕ್ಷಣೀಯವಲ್ಲ. ಸೇವಾ ಸಂಸ್ಥೆಗಳ ಜೀವನ ವಿಧಾನವನ್ನು ಗಮನಿಸುವ, ಗೌರವಿಸುವ, ಪ್ರೋ ತ್ಸಾಹಿಸುವ ಪ್ರವೃತ್ತಿ ಸುಸಂಸ್ಕೃತಿಯ ಲಕ್ಷಣ. ನಮ್ಮೆದುರಿಗಿರುವ ಅಪಾಯ ಗಂಭೀರವಾದುದು. ದೇಶ ನನ್ನದು, ದೇಶಕ್ಕಾಗಿ ನಾನು ಎಂಬ ಭಾವನೆ ಬರದ ಹೊರತು ಭಾರತೀಯ ಮುಂದುವರಿಯಲಾರ.

## ಶ್ರೀ ವಾಣಿ

ಕಷ್ಟ ಬಂದಾಗಲೇ ವಕ್ತಿತ್ವದ ವಿಕಾಸ. ಸುಖ ಬಂದರೆ ಸತ್ವ ಪರೀಕ್ಷೆಯಾ ಗದು ಕಷ್ಟ ಬಂದಾಗ ಶಕ್ತಿ ಹೊಮ್ಮಿ, ವಕ್ತಿತ್ವ ವಿಕಾಸವಾಗಲು ಪರಮಾತ್ಮ ಈ ವಾತಾವರಣವನ್ನು ಸೃಷ್ಟಿಮಾಡಿರ ಬೇಕು.

ಮನುಷ್ಯ ತಪ್ಪನ್ನು ಮಾಡಿಯೇ ಮಾಡುತ್ತಾನೆ. ಅದು ಸಹಜವಾದುದು ಆದರೆ ದೊಡ್ಡವರು ಜೀವನದಲ್ಲಿ ಕಾಣುವ ವೈಶಿಷ್ಟ್ಯವೆಂದರೆ ಅವರು ಮಾಡಿದ ತಪ್ಪನ್ನು ಮುಚ್ಚುವುದಿಲ್ಲ. ಜನತೆಯ ಮುಂದೆ ಅಪರಾಧಗಳನ್ನು ಬಿಚ್ಚಿ ಹೇಳಿ ದೊಡ್ಡವರು ದೇವರ ಕ್ಷಮಾಪಣೆ ಕೇಳಿ ಮತ್ತೆ ಅದೇ ತಪುಗಳುತಮ್ಮ ಬದುಕಿನಲ್ಲಿ ಸಂಘಟಿಸದಂತೆ ಎಚ್ಚರಿಕೆಯನ್ನು ವಹಿಸುತ್ತಾರೆ. ಅವರು ಜೀವನದಲ್ಲಿ ಮೇಲೆದ್ದು ಬುದ್ಧರಾಗುತ್ತಾರೆ. ಆದರೆ ನಾವು ತಮ್ಮ ತಪ್ಪುಗಳನ್ನು ಒಪ್ಪಿಕೊಳ್ಳು ವುದು ಅಗೌರವ ಎಂದು ಭಾವಿಸಿ ಪಾತಾಳಕ್ಕೆ ಬೀಳುತ್ತೇವೆ, ಮತ್ತೇ ನಾವು ಮೇಲೇಳುವುದಿಲ್ಲ. ಜೀವನದಲ್ಲಿ ಜಜ್ಜಿ ಹೋಗುತ್ತೇವೆ.

# ಶ್ರೀ ಸಿದ್ಧಲಿಂಗೇಶ್ವರ ವಚನ



ಸತ್ಯದಲ್ಲಿ ನಡೆವುದು ಶೀಲ;
ಸತ್ಯದಲ್ಲಿ ನುಡಿವುದು ಶೀಲ;
ಸಜ್ಜನ ಸದಾಚಾರದಲ್ಲಿ ವರ್ತಿಸಿ
ನಿತ್ಯವನರಿವುದೆ ಶೀಲ ಕಾಣಿಭೋ
ಮಹಾಲಿಂಗ ಗುರು ಶಿವಸಿದ್ದೇಶ್ವರ ಪ್ರಭುವಿನಲ್ಲಿ!

ಯಾರು ತಮ್ಮ ನಡೆ ನುಡಿ ಮೊದಲಾದವುಗಳನ್ನು ಶುದ್ಧಮಾಡಿಕೊಂಡು ನಿತ್ಯತತ್ವವನ್ನು ಅರಿಯುವರೋ ಅವರೇ ಶೀಲವಂತರು. ಸತ್ಯತನದಲ್ಲಿ ನಡೆವುದಕ್ಕಿಂತ, ಸತ್ಯತನದಲ್ಲಿ ನುಡಿವುದಕ್ಕಿಂತ, ಸಜ್ಜನರ ಸದಾಚಾರಮಾರ್ಗದಲ್ಲಿ ನಡೆದು ನಿತ್ಯವನ್ನು ತಿಳಿಯುವುದಕ್ಕಿಂತ ಬೇರೆ ಶೀಲವೆಂಬುದೇ ಇರುವುದಿಲ್ಲ.

## ಲೇಖಕರಲ್ಲಿ ಮನವಿ

"ಸಿದ್ಧಗಂಗಾ" ಶ್ರೀ ಸಿದ್ಧಗಂ
ಮಠದಿಂದ ಪ್ರಕಟವಾಗುತ್ತಿರುವ ಮಾ
ಪತ್ರಿಕೆ. ಶ್ರೀ ಮಠದ ಹಳೆಯ ವಿದ್ಯಾ
ಸಂಘದ ಹೆಮ್ಮೆಯ ಸೇವಾ ಪುರವ
ಮೇಲಾಗಿ ಶ್ರೀ ಮಠದ ಮುಖವಾ
ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾ
ಮಹಾಸ್ವಾಮಿಗಳವರ ದಿವ್ಯ ಮಾರ್ಗದ
ನದಲ್ಲಿ 31ನೇ ವರ್ಷಕ್ಕೆ ಪಾದಾರ್ಪ
ಮಾಡಿದೆ. ತ್ರಿವಿಧ ದಾಸೋಹ ತತ್ವ
ಯಿಂದ ಮುನ್ನಡೆಯುತ್ತಿರುವ ಪತ್ರಿಕೆ.
ಧ್ಯೇಯ ಸಾಧನೆಗಾಗಿ ನಾಡಿನ ಗ
ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ
ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿ
ಚಿಂತನ ಮುಂತಾದ ಲೇಖನಗಳನ್ನು ಸ್ವಾ
ತಿಸುತ್ತದೆ. ಅಸ್ವೀಕೃತ ಲೇಖನಗಳನ
ಪಡೆಯಲು ಸಾಕಷ್ಟು ಅಂಚೆ ಸ್ಟಾಂಪು
ಗಳನ್ನು ಲಗತ್ತಿಸಿರಬೇಕು. ಲೇಖನಗಳ
ಸೂಕ್ತ ಬದಲಾವಣೆ ಮಾಡಿಕೊಳ್ಳು
ಅಧಿಕಾರ ಸಂಪಾದಕರಿಗಿದೆ. ಅನುವಾದ
ರೂಪಾಂತರ ಲೇಖನಗಳಿಗೆ ಮೂಲ ಕೃತಿ
ಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ
ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡ
ಲಾಗುವುದು.


" ಸಂಪಾದಕರು "
**' ಸಿದ್ಧಗಂಗಾ ' ಮಾಸ ಪತ್ರಿಕೆ**
ಶ್ರೀ ಸಿದ್ಧಗಂಗಾಮಠ
ತುಮಕೂರು ಜಿಲ್ಲೆ–572104.



ವಾರ್ಷಿಕ ಚಂದಾ 35-00 ರೂ
ಆಜೀವ ಸದಸ್ಯತ್ವ 500-00

# ಸಂಪಾದಕೀಯ

## ವಸ್ತ್ರದಾನ

ಮಾನವೀಯ ಮೌಲ್ಯಗಳಲ್ಲಿ ದಾನವೂ ಒಂದು. ದಾನಗಳಲ್ಲಿ ಅನ್ನದಾನ, ವಸ್ತ್ರದಾನ, ಭೂದಾನ, ಕನ್ಯಾದಾನ, ಐಶ್ವರ್ಯದಾನ, ವಿದ್ಯಾದಾನ ಮುಂತಾದ ಹಲವು ವಿಧಾನಗಳು. ಹಸಿದವನಿಗೆ ಅನ್ನ, ಬೆತ್ತಲೆಯವನಿಗೆ ವಸ್ತ್ರ, ಆಶ್ರಯ ರಹಿತನಿಗೆ ನೆರಳು ನೀಡುವುದು ಹಿಂದಿನಿಂದ ನಡೆದು ಬಂದಿರುವ ಸತ್ಸಂಪ್ರದಾಯ. "ಅನ್ನವನು ಇಕ್ಕುವುದು, ನನ್ನಿಯನು ನುಡಿಯುವುದು, ತನ್ನಂತೆಪರರ ಬಗೆವುದು" ಸುಸಂಸ್ಕೃತ ಮಾರ್ಗ.

ದಿನಾಂಕ 25-7-95 ರಂದು ಶ್ರೀ ಮಠದಲ್ಲಿ ಒಂದು ಕಾರ್ಯಕ್ರಮ ನಡೆಯಿತು. ಅದಕ್ಕಾಗಿ ಬೇರೆ ಸಂಸ್ಥೆಗಳವರು ಮಾಡುವಂತೆ ಪ್ರಚಾರವಿಲ್ಲ. ಅಬ್ಬರ ಆರ್ಭಟ ಶೂನ್ಯ. ಗಿಡದಲ್ಲಿ ಹೂವು ಅರಳುವಷ್ಟು ಸಹಜವಾಗಿ, ನದಿನೀರು ಹರಿಯುವಷ್ಟು ಸಹಜವಾಗಿ, ಹಕ್ಕಿ ಹಾರುವಷ್ಟು ಸ್ವೈಜವಾಗಿ ನಡೆಯಿತು. ಅಧ್ಯಕ್ಷತೆಯಿಲ್ಲ, ಮುಖ್ಯ ಅತಿಥಿಗಳ ಭಾಷಣವಿಲ್ಲ. ಸ್ವಾಗತ, ವಂದನೆಗಳಿಲ್ಲ. ಹಾರ ತುರಾಯಿಗಳ ಮಾತಿಲ್ಲ. ಶ್ರೀ ಮಠದಲ್ಲಿ ರಜಾಕಾಲದಲ್ಲಿದ್ದು ಸಂಸ್ಥೆಯ ಕೆಲಸಕಾರ್ಯಗಳಲ್ಲಿ ಸಹಕರಿಸಿದ ದೀನ ದಲಿತ ಬಡ ಮಕ್ಕಳಿಗೆ ಪೂಜ್ಯ ಶ್ರೀ ಗಳವರು ವಸ್ತ್ರದಾನ ಮಾಡಿದರು. ಒಬ್ಬೊಬ್ಬ ವಿದ್ಯಾರ್ಥಿಗೆ ಬೆಲೆ ಬಾಳುವ ಪ್ಯಾಂಟು, ಷರಟು, ಪಂಚೆ, ಟವಲ್‌ಗಳು ದೊರೆತವು. ಫಲಾನುಭವಿ ಮಕ್ಕಳ ಆನಂದಕ್ಕೆ ಮಿತಿಯಿಲ್ಲ. ಆ ಆನಂದದ ಸವಿಯಲ್ಲಿ ಪೂಜ್ಯ ಶ್ರೀಗಳವರ ಸಂತೋಷ, ಸಂತೃಪ್ತಿ ಕಾಣುತ್ತಿತ್ತು. ತಾವು ಮಾಡುವ ಎಲ್ಲ ಸೇವೆಯೂ "ಶಿವಪೂಜೆ" ಎಂದೇ ಭಾವಿಸಿರುವ ಉನ್ನತಾತ್ಮರಿಗೆ ಅನ್ಯ ಹಿತಾರ್ಥದಲ್ಲಿಯೇ ಆನಂದ. ಪ್ರತಿದಿನ ಆರುಸಾವಿರ ಮಂದಿಗೆ ಊಟೋಪಚಾರವೇ ಬೃಹತ್ ಸೇವೆಯಾಗಿರುವಾಗ ಇಂತಹ ವಸ್ತ್ರದಾನ, ಅಶಕ್ತ ವಿದ್ಯಾರ್ಥಿಗಳಿಗೆ ಶಾಲಾ ಕಾಲೇಜುಗಳ ಫೀಜು ವಗೈರೆಗಳನ್ನು ಭರಿಸುವುದು, ವೈದ್ಯಕೀಯ ನೆರವು ಇತ್ಯಾದಿ ಸೇವಾ ಕಾರ್ಯಗಳು ನಿತ್ಯ ಪೂಜ್ಯ ಶ್ರೀಗಳವರ ದಿನಚರಿಯಾಗಿದೆ. ಎಂಬತ್ತೆಂಟರ ತುಂಬು ವಯಸ್ಸಿನಲ್ಲಿಯೂ ನಿಮಿಷ ನಿಮಿಷಾರ್ಧವೂ ವ್ಯರ್ಥವಾಗದಂತೆ ದಿನಕ್ಕೆ ಇಪ್ಪತ್ತು ಘಂಟೆಗಳ ಸಶ್ರಮ ದುಡಿಮೆ ಮಾಡುತ್ತಿದ್ದಾರೆ. ಆದರೂ "ಮಾಡಿದೆನೆಂಬುದು ಮನದಲ್ಲಿಲ್ಲ"ದ ಹಾಗಿದ್ದಾರೆ. ಬಸವಣ್ಣನವರ ತತ್ವಗಳನ್ನು ಆಚರಿಸಿ ತೋರಿಸುತ್ತಿದ್ದಾರೆ. ಶ್ರೀಗಳವರಂತೆ ದಾಸೋಹ ವ್ರತವನ್ನು ನಡೆಸುತ್ತಿರುವ ಇನ್ನೊಂದು ಉದಾಹರಣೆ ಕಾಣದು "ಪ್ರಸಾದ ಮಾಡಿಕೊಂಡು ಬನ್ನಿ" ಎಂಬುದೇ ಶ್ರೀ ಮಠದ ಮಂತ್ರ: ಪೂಜ್ಯ ಶ್ರೀಗಳವರು ಮಾಡುವ ಜಪ. ಹಸಿದ ಹೊಟ್ಟೆಗೆ ಒಂದು ತುತ್ತು ಅನ್ನ ಕೊಡುವುದೇ ಧರ್ಮ, ಬೆಳಕು ಕಾಣದ ಗುಡಿಸಿಲಿನಲ್ಲಿ ಒಂದು ಹಣತೆ ಹಚ್ಚುವುದೇ ಸೇವೆ, ಜೀವನೋಪಾಯಕ್ಕಾಗಿ ಮಾರ್ಗ ತೋರುವುದೇ ಪೂಜೆ ಎಂದು ನಡೆದಿರುವ ಪೂಜ್ಯ ಶ್ರೀಗಳವರ "ವಜ್ರಮಹೋತ್ಸವ"ದ ಸಿದ್ಧತೆ ಭರದಿಂದ ಮುನ್ನಡೆದಿದೆ. ನಾಡಿನ ಉದಾರ ಹೃದಯಿಗಳಾದ ತಾವು ಈ ಸೇವಾ ತಪಸ್ವಿಗಳ ಮಣಿಹದಲ್ಲಿ ಭಾಗಿಗಳಾಗಿ ಎಂದು "ಸಿದ್ಧಗಂಗಾ" ಪ್ರಾರ್ಥಿಸುತ್ತದೆ.

# ಮಹಾದೇವಿಯಕ್ಕನ ವಚನಾಮೃತ

"ಕನ್ನಡ ಕವಿ ಕಾಳಿದಾಸ" ಶ್ರೀ ಮೋಟಗಿ ಮಲ್ಲಿಕಾರ್ಜುನ, ಅಥಣಿ, ಬೆಳಗಾವಿ ಜಿಲ್ಲೆ.

1 ಕಲ್ಯಾಣ ಕೈಲಾಸವೆಂಬ ನುಡಿ ಹಸನಾಯಿತ್ತು. ಒಳಗೂ ಕಲ್ಯಾಣ, ಹೊರಗೂ ಕಲ್ಯಾಣ! ಇದರಂತುವನಾರು ಬಲ್ಲರಯ್ಯಾ? ನಿಮ್ಮ ಸತ್ಯ ಶರಣರ ಸುಳುಹು ತೋರುತ್ತಿದೆಯಯ್ಯಾ. ನಿಮ್ಮ ಶರಣ ಬಸವಣ್ಣನ ಕಾಂಬೆನೆಂಬ ತವಕವೆನಗಾಯಿತ್ತು. ಕೇಳಾ ಚೆನ್ನಮಲ್ಲಿಕಾರ್ಜುನಾ.

2 ಶಿವಗಣಂಗಳ ಮನೆಯಂಗಳ ವಾರಣಾಸಿಯೆಂಬುದು ಹುಸಿಯೆ ಪುರಾತನರ ಮನೆಯಂಗಳದಲ್ಲಿ ಅಷ್ಟಾಷಷ್ಟಿ ತೀರ್ಥಂಗಳು ನೆಲೆಸಿಪ್ಪವಾಗಿ? ಅದೆಂತೆಂದಡೆ–ಅದಕ್ಕೆ ಆಗಮ ಸಾಕ್ಷಿಃ

ಕೇದಾರಸ್ಯೋದಕೇ ಪೀತೇ ವಾರಾಣಸ್ಯಾಂ ಮೃತೇ ಸತಿ!
ಶ್ರೀಶೈಲ ಶಿಖರೇ ದೃಷ್ಟೇ ಪುನರ್ಜನ್ಮನ ವಿದ್ಯತೇ॥ ಎಂಬ ಶಬ್ದಕ್ಕಧಿಕವು.

ಸುತ್ತಿ ಬರಲು ಶ್ರೀಶೈಲ, ಕೆಲಬಲದಲ್ಲಿ ಕೇದಾರ, ಅಲ್ಲಿಂದ ಹೊರಗೆ ವಾರಣಾಸಿ.
ವಿರಕ್ತಿ ಬಿಡೆಯಾಗಿ ಭಕ್ತಿ ಮೊಳೆಯಾಗೆ, ಎನ್ನದೇವ ಚನ್ನಮಲ್ಲಿಕಾರ್ಜುನಾ
ನಿಮ್ಮ ಭಕ್ತರ ಮನೆಯಂಗಳ ಪ್ರಯಾಗದಿಂದ ಗುರುಗಂಜಿಯಧಿಕ ನೋಡಾ!

3 ಅನಿಮಿಷನಲ್ಲಯ್ಯ, ಮರುಳಶಂಕರಯ್ಯ, ಕೋಲ ಶಾಂತಯ್ಯ, ಮಾದರ ಧೂಳಯ್ಯ, ಮಿಂಡಮಲ್ಲಿನಾಥ, ಚನ್ನಬಸವಣ್ಣ, ಚೇರಮರಾಯ, ತೆಲುಗುಜೊಮ್ಮಣ್ಣ, ಕಿನ್ನರಯ್ಯ, ಹಲಾಯುಧ, ಭಂಡಾರಿ ಬಸವರಾಜ ಮುಖ್ಯರಾದ ಚನ್ನಮಲ್ಲಿಕಾರ್ಜುನನ ಶರಣರಿಗೆ ನಮೋ ನಮೋ ಎಂಬೆನು!

4 ಮರ್ತ್ಯಲೋಕದ ಭಕ್ತರ ಮನವ ಬೆಳಗಲೆಂದು ಇಳಿತಂದನಯ್ಯಾ ಶಿವನು; ಕತ್ತಲೆಯ ಪಾಳೆಯವ ರವಿ ಹೊಕ್ಕಂತಾಯಿತ್ತಯ್ಯಾ, ಚಿತ್ತದ ಪ್ರಕೃತಿಯ ಹಿಂಗಿಸಿ ಮುಕ್ತಿಪಥವ ತೋರಿದನೆಲ್ಲ ಅಸಂಖ್ಯಾತ ಗಣಂಗಳಿಗೆ, ತನುವೆಲ್ಲ ಸ್ವಯಲಿಂಗ, ಮನವೆಲ್ಲ ಚರಲಿಂಗ; ಭಾವವೆಲ್ಲ ಮಹಾಘನದ ಬೆಳಗು, ಚನ್ನಮಲ್ಲಿಕಾರ್ಜುನಯ್ಯ, ನಿಮ್ಮ ಶರಣ ಸಮ್ಯಗ್ ಜ್ಞಾನಿ ಚನ್ನಬಸವಣ್ಣನ ಶ್ರೀಪಾದಕ್ಕೆ ಶರಣೆಂದು ಎನ್ನಭವಂ ನಾಸ್ತಿಯಾಯಿತ್ತಯ್ಯ.

[ಕಲ್ಯಾಣ ಪಟ್ಟಣಕ್ಕೆ ಅಕ್ಕನು ಆಗಮಿಸಿದಾಗ ಆ ಕಲ್ಯಾಣದ ಮಹಿಮಾತಿಶಯಗಳನ್ನು ಕುರಿತು ಹಾಡುತ್ತ ಮುಂದೆ ಅನುಭವ ಮಂಟಪವನ್ನು ಪ್ರವೇಶಿಸಿ ಅಲ್ಲಿರ್ದ ಬಸವಾದಿ ಪ್ರಮಥರ ಬಳಗವನ್ನು ಕಂಡು ಆನಂದ ಪರವಶಳಾಗಿ, ಶರಣರ ಸಂಗದಿಂದುಂಟಾಗುವ ಲಾಭವನ್ನೂ ಮತ್ತು ಅವರ ಹಿರಿಮೆ, ಗರಿಮೆ, ಮಹಿಮೆಗಳನ್ನು ಮನವಾರೆ ಕೊಂಡಾಡಿದ್ದಾಳೆ.]

(ಮುಂದುವರಿಯುತ್ತದೆ)

# ಕ್ತಿ ನಿರ್ಮಾಣಕ್ಕೆ ಪ್ರತಿಬಂಧಕವಾಗಿರುವ ಪ್ರಸ್ತುತ ಶಿಕ್ಷಣ

ಅರೆಯೂರು ನರಸಿಂಹಮೂರ್ತಿ,
ಪ್ರ. ಶಿಕ್ಷಕರು, ಸಿದ್ಧಗಂಗಾ ಶಿಕ್ಷಕ ತರಬೇತಿ ಸಂಸ್ಥೆ, ತುಮಕೂರು.

## ದ್ಯಾಭ್ಯಾಸ ಮತ್ತು ಪರೀಕ್ಷೆಗಳು :

ವಿದ್ಯಾಭ್ಯಾಸ ಎಂಬುದು ಶಿಕ್ಷಣದ ವಿಶಾಲಾರ್ಥ ಕೊಡುವುದಿಲ್ಲ. 'ವಿದ್ಯಾರ್ಥಿ' ಬ ಪದವು 'ಶಿಕ್ಷಕ' ಎಂಬ ಪದದಷ್ಟೇ ಪವಿತ್ರ ಎಂಬುದನ್ನು ಗಮನದಲ್ಲಿಡಬೇಕು. ಣ ಕ್ಷೇತ್ರದಲ್ಲಿ ವಿದ್ಯಾರ್ಥಿಯ ಪಾತ್ರವೇ ಪ್ರಧಾನ ಎಂದು ಇತ್ತೀಚಿನ ರಾಷ್ಟ್ರೀಯ ಣ ಪದ್ಧತಿ ಜಾರಿಗೆ ಬಂದಿದ್ದು "ಶಿಶು ಕೇಂದ್ರಿತ' ಶಿಕ್ಷಣ (Child centred pproach) ಪದ್ಧತಿಯನ್ನು ಅಳವಡಿಸಿ ಬೋಧನೆ ನಡೆಸಬೇಕೆಂದು ಒತ್ತಾಯಿಸಿದೆ. ಥಮಿಕ ಒಂದನೇ ತರಗತಿಯಿಂದ ಹತ್ತನೇ ತರಗತಿಯವರೆಗೆ ಪಠ್ಯ ಪುಸ್ತಕಗಳನ್ನು ಕ್ಕನುಗುಣವಾಗಿ ರಚಿಸಲಾಗಿದೆ. ವಿದ್ಯಾರ್ಥಿಯ ದೆಸೆಯಲ್ಲಿಯೇ ಶಿಕ್ಷಣದ ಉದ್ದೇಶ ನ್ನು ಫಲಕಾರಿ ಮಾಡಬೇಕೆಂಬುದು ಶಿಕ್ಷಣ ತಜ್ಞರ ಅಭಿಪ್ರಾಯವಾಗಿದೆ. ಆದರೆ ವಲ ತರಗತಿಯಲ್ಲಿ ಕಲಿತ ಪಾಠವೊಂದೇ ಮಕ್ಕಳಲ್ಲಿ ಪರಿಣಾಮಕಾರಿಯಾಗುವುದಿಲ್ಲ. ಾವುದೇ ವಿಧಾನ ಜಾರಿಗೆ ತಂದರೂ ಮಕ್ಕಳಲ್ಲಾಗಲೀ, ಶಿಕ್ಷಕರಲ್ಲಿಯಾಗಲೀ, ಾರ್ಪಟು ತರಲಾಗುತ್ತಿಲ್ಲ. ಯಾಂತ್ರಿಕವಾಗಿ ಆಗಬಹುದು. ಒಂದು ಹೇಳಿಕೆಯಿದೆ, he best teacher is one who inspires the Students ದರೆ ಇದು ಸಾಧ್ಯವಿದೆಯೇ? ಮಕ್ಕಳ ಮುಂದಿನ ದುಡಿಮೆಗೆ ಯೋಗ್ಯವಾದ ಕ್ಷಣವನ್ನು ಕೊಡಿಸಬೇಕೆಂಬುದನ್ನು ಗಮನದಲ್ಲಿಟ್ಟುಕೊಂಡು ಆ ದಿಸೆಯಲ್ಲಿ ಅಪಾರ ಣ ವೆಚ್ಚ ಮತ್ತು ಅಂಕಗಳಿಕೆಗೆ ಸುಲಭಮಾರ್ಗವನ್ನು ಹುಡುಕುತ್ತಿರುವುದೇ ಇಂದಿನ ಕ್ಷಣದ ಉದ್ದೇಶವಾಗಿದೆ ಮತ್ತು ಪೋಷಕರೂ ಸಹ ಇದಕ್ಕೆ ಸಮ್ಮತಿಸಿರುತ್ತಾರೆ. ಂದಿನ ಶಿಕ್ಷಣ ಯಾವರೀತಿ ಎಂಬುದರ ಬಗ್ಗೆ ಅಮೇರಿಕಾದ ಒಬ್ಬ ಟೀಕಾಕಾರರು ುಂದುವರಿದ ರಾಷ್ಟ್ರವನ್ನೇ ಆಧಾರವಾಗಿಟ್ಟುಕೊಂಡು ಹೇಳಿದ ಮಾತಿದು-ಇನ್ನು ನ್ನಂತಹ ರಾಷ್ಟ್ರದ ಸ್ಥಿತಿ ಹೇಗಿರಬಹುದು.

'Education is that mysterious process where by nformation from the lecture notes cf the professor n to the note book of a student through his pen vithout entering the mind of either.'

ವಿದ್ಯಾರ್ಥಿಗಳು ಏನುಕಲಿತಿದ್ದಾರೆಂಬುದನ್ನು ಶಿಕ್ಷಕರು ತಿಳಿಯಲಿಕ್ಕೆ ಮತ್ತ ಅವರ ಭವಿಷ್ಯದ ಬುನಾದಿಗೆ ಮೌಲ್ಯ ಮಾಪನದ ಕಾರ್ಯ ನಡೆಯ ಬೇಕಾಗುತ್ತ ಈ ಕಾರ್ಯವು ತರಗತಿಯಲ್ಲಿ ಆಗಿಂದಾಗ್ಗೆಯೂ ಪರೀಕ್ಷೆಗಳ ಮೂಲಕವೂ ನಡ ಲಾಗುತ್ತದೆ. ಇದು ನಿಜವಾದ ಅಳತೆಗಳಲ್ಲ ಎಂಬುದು ಇತ್ತೀಚೆಗೆ ಮನವರಿ ಯಾಗುತ್ತಿದೆ. ಇದಕ್ಕೆ ಕಾರಣಗಳು ಹಲವಾರು. ಆದರೂ ಪರೀಕ್ಷೆ ಎಂಬ ಪದವನ್ ಬಳಸಿಕೊಂಡು ಅಳತೆಮಾಡಿ ಯೋಗ್ಯತೆ ತಿಳಿದುಕೊಳ್ಳುತ್ತಾರೆ. ಇದರ ಮೂಲ ವಿದ್ಯಾರ್ಥಿಯ ಸರ್ವತೋಮುಖ ಪ್ರಗತಿ ಅಳೆಯಲಾಗುವುದಿಲ್ಲ. ಇದು ಹಿಂದೆಯ ಇತ್ತು, ಈಗಲೂ ಇದೆ, ಮುಂದುವರೆಯುತ್ತಲೂ ಇರುತ್ತದೆ.

**ಗುರು - ಶಿಷ್ಯರ ಸಂಬಂಧ :- (ಪ್ರಾಚೀನದಲ್ಲಿ)**

ಪರಿಪೂರ್ಣ ವಿದ್ಯಾಭ್ಯಾಸವು ಗುರುಗಳ ಸಮ್ಮುಖದಲ್ಲಿಯೇ ನಡೆಯಬೇಕಾಗಿ ಇಂದಿನಂತೆ ಹಾಸ್ಟೆಲ್‌ಗಳಲ್ಲ, ಗುರುಕುಲಾಶ್ರಮ, ಅಲ್ಲೇ ಎಲ್ಲರವಾಸ, 'ಗುರು' ಎಂ ಪದಕ್ಕೆ ಬದಲಾಗಿ ಆಚಾರ್ಯ ಎಂದು ಬಳಸಲಾಗಿತ್ತು. ಶಿಷ್ಯರು ತಮ್ಮ ಅಧ್ಯಯ ಪೂರೈಸಿಕೊಂಡು ಹಿಂದಿರುಗುವ ಸಂದರ್ಭದಲ್ಲಿ ಆಚಾರ್ಯರುಗಳು ಬೀಳ್ಕೊಡುವಾ ಶಾಸನರೂಪದಲ್ಲಿರುವಂತೆ ಕೆಲವು ವಾಕ್ಯಗಳ ಮೂಲಕ ಆಶೀರ್ವದಿಸಿ ಹಿತಕೋ ಕಳುಹಿಸುವುದಿತ್ತು. ತೈತ್ತರೀಯ ಉಪನಿಷತ್ತಿನಲ್ಲಿ ಶಿಕ್ಷಾವಲ್ಲಿ ಎಂಬ ಭಾಗದಲ್ಲಿ ಮುಖ ವಾದ ಕೆಲವು ಸಾಲುಗಳು ಈರೀತಿ ಪ್ರಾರಂಭವಾಗುತ್ತವೆ.

'ಸತ್ಯಂವದ, ಧರ್ಮಂಚರ, ಸ್ವಾಧ್ಯಾಯ ಪ್ರವಚನಾಭ್ಯಾನ್ನ
ಪ್ರಮದಿತವ್ಯಮ್। ಮಾತೃದೇವೋಭವ। ಪಿತೃದೇವೋಭವ
ಆಚಾರ್ಯ ದೇವೋಭವ। ಅತಿಥಿದೇವೋಭವ'...............

ಅಂದರೆ ಕಲಿತ ವಿದ್ಯೆಯನ್ನು ಜೀವನದಲ್ಲಿ ಅಳವಡಿಸಿಕೊಳ್ಳಲು ಮನಸ್ಸಿಡಬೇಕ ಮತ್ತು ಅಧ್ಯಯನ ನಿಲ್ಲಬಾರದು ಮುಂದುವರಿಸುತ್ತಲೇ ಇರಬೇಕು. ಸತ್ಯಹೇಳಬೇಕು ಧರ್ಮವನ್ನು ಆಚರಿಸಬೇಕು. ತಾಯಿ, ತಂದೆ, ಆಚಾರ್ಯ ಮತ್ತು ಅತಿಥಿಗಳನ್ನು ದೇವರೆಂದು ಪರಿಗಣಿಸಿ ವಿಧೇಯರಾಗಿರಬೇಕು. ಅಂದು ಇದು ಆಚರಣೆಯಲ್ಲಿತ್ತು ಗುರುಗಳು ಅದೇ ರೀತಿ ಇರುತ್ತಿದ್ದರು ಮತ್ತು ಶಿಷ್ಯರು ಪಾಲಿಸಲು ಮನಸ್ಸು ಕೊಡುತ್ತಿದ್ದರು. ಜ್ಞಾನ, ವಿಜ್ಞಾನ, ವೇದ, ಉಪನಿಷತ್ತು ಮುಂತಾದ ವಿಷಯಗಳ ಜೊತೆಗೆ ಧರ್ಮದಿಂದ ಕಾರ್ಯನಿರ್ವಹಿಸಿ ಪರಾವಲಂಬಿಗಳಾಗದೆ ಆನಂದದಿಂದ ಜೀವನ ಮಾರ್ಗವನ್ನು ಕಂಡು ಕೊಂಡಿದ್ದರು. ಗುರುಗಳೇ ಒಂದು ಪಾಠೋಪಕರಣದಂತೆ ಇದ್ದು ಆಚಾರ, ವಿಚಾರ ಮತ್ತು ಕರ್ತವ್ಯಪಾಲನೆಯಲ್ಲಿ ಮಾದರಿಯಾಗಿದ್ದರು. ಮೌಲ್ಯ ಮಾಪನ ಆಗಿಂದಾಗ್ಗೆ ನಡೆಯುತ್ತಿತ್ತು. ತಪ್ಪುತಿದ್ದಿ ಹೇಳುವ ಅವಕಾಶವಿತ್ತು ಪ್ರಯೋಗ, ವೀಕ್ಷಣೆ ಮತ್ತು ತೀರ್ಮಾನ ಕೈಗೊಳ್ಳುವ ಅವಕಾಶವಿರುತಿತ್ತು. ಎಲ್ಲವ ಸದುದ್ದೇಶಗಳಿಂದ ಕೂಡಿತ್ತು.

ಗುರು-ಶಿಷ್ಯರಲ್ಲಿ ಅನ್ಯೋನ್ಯ ಭಾವನೆ ಇತ್ತು. ಒಬ್ಬರೊನ್ನೊಬ್ಬರು ಅರ್ಥಮಾಡಿಕೊಂಡು ವ್ಯವಹರಿಸುತ್ತಿದ್ದರು. ಪ್ರಾಚೀನಯುಗಗಳಲ್ಲಿಯೂ ಇದೇರೀತಿ ಇದ್ದು ಧರ್ಮದಿಂದ ಜೀವನ ನಡೆಸುತ್ತಿದ್ದ ಎಷ್ಟೊಂದು ಮಂದಿಯನ್ನು ಕಾಣುತ್ತಿರುತ್ತೇವೆ. ಗುರುಕುಲಾಶ್ರಮ, ಋಷಿಮುನಿಗಳ ಸಂಪರ್ಕದಿಂದಾಗಿ ಆ ಸ್ಥಳ ಪವಿತ್ರವಾದ ಕೇಂದ್ರಗಳಾಗಿದ್ದವು. ಇಂದು ಶಾಲಾ ಕಾಲೇಜುಗಳಲ್ಲಿನ ವಿದ್ಯಾಭ್ಯಾಸಕ್ಕಿಂತ ಖಾಸಗಿಯಾಗಿ ಅದೇ ಶಿಕ್ಷಕರು ನಡೆಸುತ್ತಿರುವ ಮನೆಪಾಠಗಳಿಗೆ (Tuition) ಹೋಗುವ ಒಂದು ಮೋಜು ಅತಿ ಹೆಚ್ಚೆಂದರೆ, ಶೇ. 90 ರಷ್ಟು ಎಂದು ಹೇಳಬಹುದು. ಪಟ್ಟಣಗಳಲ್ಲಿ ಕಾಲೇಜಿನ ವಿದ್ಯಾಭ್ಯಾಸಕ್ಕೆ ಸೇರುವ ಮುನ್ನವೇ ಮನೆಪಾಠದ ಅಧ್ಯಾಪಕರಿಗೆ ಶುಲ್ಕ ಕೊಟ್ಟು ಸ್ಥಳ ಕಾದಿರಿಸಿರುತ್ತಾರೆ. ಅಲ್ಲಿನಶಿಸ್ತು ಎಷ್ಟರಮಟ್ಟಿಗೆ ಇದೆ ಎಂದರೆ ರಸ್ತೆಗಳಲ್ಲಿ ಅವರುಗಳು ಹೊರಗೆ ಬರುವಾಗ ನಿರ್ಭಯವಾಗಿ ಯಾರು ಓಡಾಡುವಂತಿಲ್ಲ. ಶಾಲೆಯ ಶಿಸ್ತು ಮಾಯವಾಗುತ್ತಿರುವಾಗ ಯಾರ ಹತೋಟಿ ಅವರ ಮೇಲಿರುತ್ತದೆ. ಈ ವಿದ್ಯಾರ್ಥಿಗಳು ಯಾರನ್ನೂ 'ಗುರು' ಎಂದು ಸಂಬೋಧಿಸಬೇಕು! ಶಿಷ್ಯರೇ–ಗುರುಗಳನ್ನು ಪರೀಕ್ಷಿಸುವಂತಿರುತ್ತದೆ. ಇದರಿಂದ ಶಿಕ್ಷಣದ ಉದ್ದೇಶಗಳು ಫಲಕಾರಿ ಯಾಗುತ್ತದೆಯೆ? ಸ್ವಾಮಿವಿವೇಕಾನಂದರು ಪ್ರಾಚೀನ ಶಿಕ್ಷಣದ ಬಗ್ಗೆ ಈ ರೀತಿ ಹೇಳಿದ್ದಾರೆ.

The ancient system of education in India was different from the modern system· The students had not to Pay. It was thought that knowledge is so sac red that no man ought to sell it. The teacher used totake students without charge and not only so, most of them gave Their students food and clothes· The wealthy families made gifts to them and they in their turn had to maintain their students.

**ವಿದ್ಯೆ ಎಂದರೇನು?**

ಶಿಕ್ಷಣ ಎಂಬ ಪದದ ನಿರೂಪಣೆಗಳು ಈ ಕೆಳಕಂಡಂತೆ ಇದೆ–

1 Eudcation is the manifestation of perfection that is already in man

ಮನುಷ್ಯನಲ್ಲಿ ಅದಾಗಲೇ ಇರುವ ಪರಿಪೂರ್ಣತೆಯನ್ನು ವ್ಯಕ್ತಗೊಳಿಸುವ ಪ್ರಕ್ರಿಯೆಯೇ ವಿದ್ಯಾಭ್ಯಾಸ.

2) ನೂತನ ವಿಚಾರಗಳನ್ನು ಅರಗಿಸಿಕೊಂಡು ಅವುಗಳನ್ನು ನಮ್ಮ ವ್ಯಕ್ತಿತ್ವದ ಒಂದು ಅಂಗವಾಗಿರಿಸಿಕೊಳ್ಳುವುದೇ ವಿದ್ಯಾಭ್ಯಾಸ.

3) ನಮ್ಮ ಇಚ್ಛಾ ಶಕ್ತಿಯ ಹುಚ್ಚುಪ್ರವಾಹವನ್ನು ಹಾಗೂ ಅದರ ಸ್ವಚ್ಛಂದ ಅಭಿವ್ಯಕ್ತಿಯನ್ನು ಹತೋಟಿಗೆ ತಂದುಕೊಂಡು, ಮುಕ್ತವಾಗಿ, ಉಪಯುಕ್ತವಾಗಿ ಬಳಸಿಕೊಳ್ಳುವುದೇ ವಿದ್ಯಾಭ್ಯಾಸ.

ವಿದ್ಯೆ ಎಂಬುದು ಪುಸ್ತಕದ ಜ್ಞಾನವಲ್ಲ. ವಿವಿಧ ವಿಷಯಗಳ ಸಂಗ್ರಹಣೆಯೇ ಅದು ಅಲ್ಲ, ಇಚ್ಛಾಶಕ್ತಿಯು ಸುವ್ಯವಸ್ಥಿತವಾಗಿ ಸರಿಯಾದ ರೀತಿಯಲ್ಲಿ ಪ್ರಯೋಜನಕಾರಿಯಾಗುವಂತೆ ಮಾಡಲು ಮನಸ್ಸನ್ನುಗಳಿಸುವ ಸಾಧನವನ್ನಾಗಿ ಮಾಡಲು ಬೇಕಾದ ತರಬೇತಿಯೇ ನಿಜವಾದ ವಿದ್ಯೆ.

**ಜ್ಞಾನದ ದಾಹಕ್ಕೆ ಗುರೂನ್ವೇಷಣೆ :**

ಸ್ವಾಮಿ ವಿವೇಕಾನಂದರು ಬಾಲ್ಯದಲ್ಲಿ ನರೇಂದ್ರನೆಂದೇ ಹೆಸರುಗಳಿಸಿದ್ದ ಬಾಲಕ ದೇವರನ್ನು ಕಾಣ ಹಂಬಲದಿಂದ ಅನೇಕರನ್ನು ಭೇಟಿಮಾಡಿ ಪರೀಕ್ಷಿಸಿ, ದಕ್ಷಿಣೇಶ್ವರದ ಅರ್ಚಕ ಶ್ರೀ ರಾಮಕೃಷ್ಣರನ್ನು ಭೇಟಿಯಾದ ಮೇಲೆ ಅವರನ್ನು ಪರೀಕ್ಷಿಸಲು ತೊಡಗಿದಾಗ ಎರಡು ರೀತಿ ಅವರನ್ನು ಪರೀಕ್ಷಿಸಲಾಯಿತು. ಕೆಲವು ನಾಣ್ಯಗಳನ್ನು ಅವರು ಮಲಗುವ ಹಾಸಿಗೆಯ ಅಡಿ ಇಟ್ಟು ಮರೆಯಲ್ಲಿ ವೀಕ್ಷಿಸಿದ್ದು. ಅವರು ಬಂದು ಅದರ ಮೇಲೆ ಮಲಗಲು ಹೋದಾಗ ಚೇಳು ಕಡಿದವರಂತೆ ಬೆಚ್ಚುಬಿದ್ದು ಅದನ್ನು ಗಮನಿಸಿದ್ದು. ಶ್ರೀಮಾತೆ ಶಾರದಾದೇವಿಯವರನ್ನು ತಮ್ಮ ಸಹಧರ್ಮಿಣಿಯಾಗಿ ಕೈ ಹಿಡಿದರೂ ಸಹ ಅವರೊಡನೆ ಶ್ರೀ ರಾಮಕೃಷ್ಣರು ಯಾವ ರೀತಿ ನಡೆದುಕೊಳ್ಳುತ್ತಿದ್ದರೆಂಬುದು ಸಹಜವಾಗಿ ಕಾಮ-ಕಾಂಚನದಿಂದ ದೂರವಾಗಿದ್ದರಿಂದಲೇ ಸ್ವಾಮಿ ವಿವೇಕಾನಂದರು ದೇಶ ವಿದೇಶಗಳಲ್ಲಿ ಹಿಂದೂ ಧರ್ಮದ ಬಗ್ಗೆ ಭಾರತವನ್ನು ಕೊಂಡಾಡಿದ್ದು. ರಾಮಕೃಷ್ಣರ ವಿಚಾರವಾಗಿ ವಿವೇಕಾನಂದರು ಏನೂ ಹೇಳುತ್ತಿರಲಿಲ್ಲ. ಎಲ್ಲಿಯವರೆಗೆ ಇಂದಿನ ವಿದ್ಯಾರ್ಥಿಗಳು ತಮ್ಮ ಸ್ವಾಭಿಮಾನವನ್ನು ಹೆಚ್ಚಿಸಿಕೊಂಡು ಶಿಕ್ಷಣದ ನಿಜವಾದ ಅರ್ಥ ತಿಳಿಯುತ್ತಾ ತಮ್ಮ ಸಾಧನೆಗಳತ್ತ ಮುಂದುವರಿದರೆ ಸುಖ.ಸಂತೋಷ ನೆಮ್ಮದಿಯನ್ನು ಪಡೆಯಬಹುದು.

**ವಿದ್ಯಾರ್ಥಿ ದೆಸೆಯಲ್ಲಿ ಬ್ರಹ್ಮಚರ್ಯದ ಮಹತ್ವ**

ಶಿಕ್ಷಣಕ್ಕೆ ಪ್ರೇರಣೆ, ಅವಧಾನ, ಆಸಕ್ತಿ ಮತ್ತು ಏಕಾಗ್ರತೆ ಮುಂತಾದ ಮಾನಸಿಕ ಪ್ರಕ್ರಿಯೆಗಳಿರಬೇಕು. ವಿದ್ಯಾರ್ಥಿಗಳಿಗೆ ಇವೆಲ್ಲವೂ ಅತ್ಯಾವಶ್ಯಕ ಬೇಕೇ ಬೇಕು. ಆಸಕ್ತಿಗೆ ಮೂಲ ಪ್ರೇರಣೆ ಮತ್ತು ನಂತರ ಅವಧಾನಇರಬೇಕು. ಒಂದೇ ವಸ್ತುವಿನ ಕಡೆ ತನ್ನ ಮನಸ್ಸನ್ನು ಕೇಂದ್ರೀಕರಿಸುವುದೇ ಅವಧಾನ. 12 ವರ್ಷಗಳ ಸತತ ಬ್ರಹ್ಮಚರ್ಯದಿಂದ ಜಗತ್ತಿನಲ್ಲಿ ಏನನ್ನು ಬೇಕಾದರೂ ಸಾಧಿಸಬಹುದೆಂದು ಯೋಗಿಗಳು, ಋಷಿಮುನಿಗಳು, ಸಂನ್ಯಾಸಿಗಳು ಸಾಧನೆಯಿಂದ ತಿಳಿದಿದ್ದರು. ಇತ್ತೀಚಿನ ದಿನಗಳಲ್ಲಿ ಹುಡುಗ ಹುಡುಗಿಯರನ್ನು ಗಮನಿಸಿದಾಗ ಸತ್ವ ರಹಿತ ಮುಖ ಭಾವಗಳನ್ನು ಕಾಣುತ್ತಿದ್ದೇವೆ.

ನಕ್ವತೆಗೆ ಕಾಲ 16 ವರ್ಷಗಳು ಎಂದು ತಿಳಿಯಲಾಗಿತ್ತು. ಇತ್ತೀಚೆಗೆ ಅದಕ್ಕಿಂತ
ಚೆಯೇ ಶಕ್ತಿ, ಬಲ, ಓಜಸ್ಸು, ತೇಜಸ್ಸು ಕಳೆದುಕೊಂಡ ವಿದ್ಯಾರ್ಥಿಗಳನ್ನು
ುತ್ತಿದ್ದೇವೆ, ಶಂಕರಾಚಾರ್ಯರು ಧರ್ಮವನ್ನು ವಿವರಿಸುವಾಗ ಇಂದು ನಪುಂಸಕ
ರುವ ಜನರು ನಮ್ಮ ಧರ್ಮದ ಬಗ್ಗೆ ಅರಿವು ಹೇಗೆ ಉಂಟುಮಾಡಬಲ್ಲರು. ಸಿನೇಮಾ
ರದರ್ಶನ, ರೇಡಿಯೋ, ವಿ.ಸಿ.ಪಿ. ವಿ.ಸಿ.ಆರ್. ಮುಂತಾದ ಸಾಧನಗಳನ್ನು
ೋಜನಕಾರಿಯಾಗಿ ಬಳಸಿಕೊಂಡು ಜ್ಞಾನದ ಮಟ್ಟ ಹೆಚ್ಚಿಸಿಕೊಳ್ಳುವ ಬದಲು
ಶ ಕಾರಿಯಾಗಿ ಬಳಸುತ್ತಾ ನಿರ್ವೀರ್ಯರಾಗಿ ಕುಳಿತಿರುವ ನಮ್ಮ ಹುಡುಗರ
ದಲ್ಲಿ ಏನನ್ನು ಕಾಣಬಲ್ಲರು? ಸ್ವಾಮಿವಿವೇಕಾನಂದರು ಹೇಳುತ್ತಾರೆ.

ಲೈಂಗಿಕ ಶಕ್ತಿಯನ್ನು ಆಧಾತ್ಮಶಕ್ತಿಯನ್ನಾಗಿ ಪರಿವರ್ತಿಸಿ, ಶಕ್ತಿಯುತವಾಗಿ
ುವ ನೀರಿನ ಪ್ರವಾಹವು ಮಾತ್ರ ವಿದ್ಯುಚ್ಛಕ್ತಿ ಪಡೆಯುವುದಕ್ಕೆ ಪ್ರಯೋಜನ
ಅತಿ ಕಡಿಮೆ ಅವಧಿಯಲ್ಲಿ ವಿದ್ಯಾಭ್ಯಾಸ (ಅಧ್ಯಯನ) ಮಾಡಿದರೂ ಹೆಚ್ಚಿನ
ಮನಸ್ಸಿನಲ್ಲಿಟ್ಟುಕೊಳ್ಳಬಹುದು. ಮೆದುಳಿನ ಜ್ಞಾಪಕ ಶಕ್ತಿಯನ್ನು ಹೆಚ್ಚಿಸಿ
ಬೇಕಾದರೆ ಕನಿಷ್ಠ ಪಕ್ಷ ವಿದ್ಯಾರ್ಥಿ ದೆಸೆಯಲ್ಲಾದರೂ ಬ್ರಹ್ಮಚರ್ಯ ಕಾಪಾಡಿ
ಬೇಕು. ಇದರಿಂದ ಶ್ರದ್ಧೆ ಹೆಚ್ಚುತ್ತದೆ. ಶುದ್ಧ ಯೋಚನೆ ಮತ್ತು ಕಾರ್ಯಗಳಲ್ಲಿ
ಗಿ ಮನಸ್ಸನ್ನು ಅಶ್ಲೀಲದ ಕಡೆಗೆ ಹರಿಯ ಬಿಡದೆ ಇರುವುದೇ ಬ್ರಹ್ಮಚರ್ಯ.
ಇದನ್ನು ಹೇಳಿಕೊಡುವವರಾರು? ಬೇಲಿಯೇ ಹೊಲಮೇಯುತ್ತಿದೆ. ಕೆಲವಾರು
ೇಶಗಳನ್ನು ಗಮನಿಸಿದಾಗ ಶಿಕ್ಷಕರೇ ಕೀಳುಭಾವನೆಗೆ ಒಳಪಟ್ಟು ಜಾತಿ, ಮತ,
ಅಂತಸ್ತು, ವಯಸ್ಸು ಎಲ್ಲವನ್ನೂ ಮರೆತು ಹತೋಟಿ ತಪ್ಪಿ ವರ್ತಿಸುತ್ತಿರುವುದನ್ನು
ನಿತ್ಯ ಕಾಣುತ್ತಿದ್ದೇವೆ. ಎಷ್ಟೋ ಸಾರಿ ಕೆಲವರು ಹೇಳಿದ್ದುಂಟು. Ph.D
ರ್ ಮಾಡದೆ ಅರ್ಧಕ್ಕೆ ನಿಲ್ಲಿಸಿದ ಒಬ್ಬ ವಿದ್ಯಾರ್ಥಿನಿಯು ತನ್ನ ನೋವನ್ನು
ಗೂ ಹೇಳದೆ ಬಾಳನ್ನೇ ಹಾಳು ಮಾಡಿಕೊಂಡ ಪ್ರಸಂಗ ಒಬ್ಬ ಪ್ರೊಫೆಸರ್ ನಿಂದ
ುತೆಂಬುದನ್ನು ತಿಳಿಯಲಾಯಿತು.

ನಮ್ಮ ಶಾಲಾಕಾಲೇಜುಗಳಲ್ಲಿ ವಿದ್ಯಾರ್ಥಿ ವಿದ್ಯಾರ್ಥಿನಿಯರು ಕೆಲವು ವಿದೇಶೀ
ೀಕತೆಗೆ ತಮ್ಮನ್ನು ತಾವೇ ಮಾರಿಕೊಂಡಿದ್ದಾರೆಂದೇ ಹೇಳಬಹುದು.
ಪ್ತ ವಯಸ್ಸಿನ ಮಕ್ಕಳಲ್ಲಿಯೂ ಸಹ ಅಸಂಸ್ಕೃತ ಭಾವನೆಗಳು ಮೂಡುತ್ತಿವೆ.
ವೀಯ ಮೌಲ್ಯ ಶಿಕ್ಷಣವನ್ನೇನೋ ಸರ್ಕಾರ ಶಾಲಾಕಾಲೇಜುಗಳಲ್ಲಿ ಜಾರಿ-
ಸಿದೆ. ಬೋಧಿಸುವವರ್ಯಾರು? ವಿದ್ಯಾರ್ಥಿ ವಿದ್ಯಾರ್ಥಿನಿಯರು ಬಹಳ ಸಲುಗೆ-
ಲೀಲಾಜಾಲವಾಗಿ ಮುಖ್ಯ ರಸ್ತೆಗಳಲ್ಲಿ ಮನೆಗಳ ಸಮೀಪವೇಕೆ ತರಗತಿ
ುವಾಗಲೂ ಲಜ್ಜೆ ಮೀರಿ ನಡೆಯುತ್ತಿರುತ್ತಾರೆ. ಒಂದು ಸುಭಾಷಿತ ಜ್ಞಾಪಕಕ್ಕೆ
ದೆ.

ಅರ್ಥಾತುರಾಣಾಂ ನ ಗುರುರ್ನ ಬಂಧುಃ ವಿದ್ಯಾತುರಾಣಾಂ ನ ಸುಖನ್ನ ನಿದ್ರಾ।
ಕಾಮಾತುರಾಣಾಂ ನಭಯಾನಲಜ್ಜಾ। ಕ್ಷುಧಾತುರಾಣಾಂ ನರುಚಿರ್ನಪಕ್ವಂ

ಹಣದ ಆತುರ (ಆಸೆ) ಇಟ್ಟುಕೊಂಡಿರುವವವನು ಗುರುಗಳನ್ನಾಗಲೀ ಬಂಧುಗಳನ್ನಾಗಲೀ ಬಿಡುವುದಿಲ್ಲ. ವ್ಯವಹಾರಿಕವಾಗಿ ಕಠೋರ ಪದಗಳನ್ನು ಬಳಸಿ ಸ… ವಾಪಸ್ಸು ಪಡೆಯಲು ಇಚ್ಛಿಸುತ್ತಾನೆ. ಇನ್ನೂ ವಿದ್ಯಾತುರಾಣಾಂ – ವಿದ್ಯೆಯನ್ನು ಕಲಿಯಲೇ ಬೇಕೆಂಬುವನು ಸುಖವಾದ ಊಟ ಮತ್ತು ನಿದ್ರೆಗಳಿಗೆ ಹಂಬಲಿಸುವುದಿಲ್ಲ. ಕಾಮದ ಹಂಬಲವಿರುವವರು ಭಯ ಮತ್ತು ಲಜ್ಜೆ ಎರಡನ್ನು ಬಿಟ್ಟಿರುತ್ತಾರೆ. ಹೊಟ್ಟೆ ಹಸಿದಿರುವವನು ರುಚಿ, ಪಕ್ವತೆ ಮುಂತಾದುವಗಳನ್ನು ಅಪೇಕ್ಷಿಸುವುದಿಲ್ಲ.

ಈ ಅಂಶಗಳನ್ನೆಲ್ಲಾ ಪರಿಗಣಿಸಿದರೆ ಇಂದು ನಾವು ಕಾಣುತ್ತಿರುವ ಶಿಕ್ಷಣ ಕ್ಷೇತ್ರವು ಯಾವರೀತಿ ಇದೆ ಮತ್ತು ಇದು ತನ್ನ ಗುರಿಯತ್ತ ಸಾಗುತ್ತಿದೆಯೇ ಎಂಬುದನ್ನು ಗಮನಿಸಬೇಕಾಗುತ್ತದೆ. ಇದಕ್ಕೆ ಹೊಣೆ ಯಾರು? ಸಮಾಜವೇ? ಸಮಾಜ ಯಾರಿಂದಾಗಿದೆ? ವ್ಯಕ್ತಿಗೆ ತಿಳುವಳಿಕೆ ಬಂದಮೇಲೆ ವಿವೇಚನೆ ಬೆಳೆಯುತ್ತದೆ. ಇದರ ಮೂಲಕ ಸರಿ-ತಪ್ಪುಗಳನ್ನು ಗುರುತಿಸಬಹುದು. ಇದಕ್ಕೆ ಮಾಧ್ಯಮವೆ ಶಿಕ್ಷಣವಾಗಿರಬೇಕು. ಚೇತನ ಮತ್ತು ಸಂಸ್ಕಾರ ಎಂಬುವು ಮನಸ್ಸಿನ ಎರಡು ಮುಖಗಳು. ಇವು ಪ್ರಚೋದಿಸಲ್ಪಡಬೇಕಾದರೆ ಮೂರು ಜನರು ಮುಖ್ಯವಾಗಿ ಕಾರ್ಯ ನಿರ್ವಹಿಸ ಬೇಕೇ ಹೊರತು ಹೊಸಶಾಲೆಗೆ ಹೆಚ್ಚಿನ ಡೊನೇಷನ್ ಕೊಟ್ಟು ಒಳ್ಳೆಯ ಬಟ್ಟೆ ಹಾಕಿ ವ್ಯಾಕರಣರಹಿತ ಇಂಗ್ಲಿಷ್ ಪದಗಳನ್ನು ಕಲಿಸುವುದಲ್ಲ.

**ಶಿಕ್ಷಣಕ್ಷೇತ್ರದಲ್ಲಿ ಪ್ರಾಥಮಿಕ ಶಾಲೆಗಳು** (ಮುಂದುವರಿಯುತ್ತದೆ.)

---

"ಯಾವ ವಿದ್ಯಾ ವ್ಯಾಸಂಗದಿಂದ ಒಳ್ಳೆಯ ಶೀಲನಮ್ಮಲ್ಲಿ ಬೆಳೆಯುವುದೋ ಮಾನಸಿಕಶಕ್ತಿ ಹೆಚ್ಚಾಗುವುದೋ, ಬುದ್ಧಿ ವಿಶಾಲವಾಗುವುದೋ, ಯಾವುದರ ಸಹಾಯದಿಂದ ಸ್ವತಃ ತನ್ನ ಕಾಲಮೇಲೆ ತಾನು ನಿಲ್ಲುವ ಸಾಮರ್ಥ್ಯ ದೊರಕುವುದೋ ಅಂತಹವಿದ್ಯೆ ಬೇಕು."

**ಸ್ವಾಮಿ ವಿವೇಕಾನಂದ**

# ಶರಣರ ಸಮತಾವಾದ

ಶ್ರೀ ನಾಗೇಶ, ಆರ್. ನಿಲುಗಲ್, ಸಾ॥ ಕಂದಗಲ್

ಜಾತಿ, ಮತ, ಪಂಥ ಇವುಗಳಿಗೆ ಪ್ರಾಧಾನ್ಯತೆ ಕೊಟ್ಟು, ಸಮಾಜದಲ್ಲಿ ತಿಕೂಲ ಪರಿಸ್ಥಿತಿಯನ್ನು ನಿರ್ಮಿಸಿಕೊಂಡು ಪರಿಪೂರ್ಣ ಜೀವನದ ಗೊತ್ತು ರಿಗಳನ್ನು ತಿಳಿಯದೆ ಸುಮ್ಮನೆ ಬಡಿದಾಡಿ ಹಾಳಾಗುತ್ತಿರುವ ಇಂದಿನ ಸಮಾಜ ಂಥವರಿಗೆ ಸಮದೃಷ್ಟಿಯ ಕಲ್ಪನೆಯನ್ನು ನಮ್ಮ ಶರಣರು ಎಂದೋ ನೀಡಿದ್ದಾರೆ. ತಿಯೊಬ್ಬರೂ ಭೇದ ಭಾವನೆಯನ್ನೆಣಿಸದೇ ಮೇಲುಕೀಳುಗಳ ತಾರತಮ್ಯ ಮಾಡದೆ ಲರಿಗೆ ಲೇಸನ್ನೇ ಬಯಸುತ್ತಾ ಎಲ್ಲ ಜೀವರಾಶಿಗಳಲ್ಲಿ ಕರುಣೆ ಮೈತ್ರಿ ತೋರಿಸುತ್ತಾ ನೀತಿಯ ನೆಲೆಗಟ್ಟಿನಮೇಲೆ ನಿಂತು ಸುಂದರ ಸಮಾಜ ನಿರ್ಮಿಸಿ ಬಾಳಬೇಕೆಂಬುದು ನ್ಮ ಶರಣರ ಹೆಬ್ಬಯಕೆಯಾಗಿತ್ತು.

ಶರಣರ ಸಮಾಜದ ಸಮತಾವಾದವು ಆದರ್ಶ ತತ್ವಗಳೊಡಗೂಡಿದಾಗಿದೆ. ರ್ವದಲ್ಲಿ ಯಾವ ಜಾತಿ ಮತ ಪಂಥದವರಿದ್ದರೂ ವೀರಶೈವ ದೀಕ್ಷಾ ಸಂಸಾರ-ನ್ನು ಹೊಂದಿದಮೇಲೆ ಅವರೆಲ್ಲರೂ ಸಮಾಜದಲ್ಲಿ ಸಮಾನರೆಂದು ಪರಿಗಣಿಸು-ದ್ದರು. ಸಮಾಜದಲ್ಲಿಯ ಜಾತ್ಯಾದಿಗಳಿಂದಿದ್ದ ತರತಮ ಭಾವಗಳು ದೀಕ್ಷಾ ಸ್ಕಾರದಿಂದ ಮಾಯವಾಗಿ ಸಮತಾಭಾವ ಉಂಟಾಗಿ ವ್ಯವಹಾರ ದೃಷ್ಠಿಯಿಂದ ಮಾಜದಲ್ಲಿ ಐಕ್ಯ ಉಂಟಾಗುವದು. ಮತ್ತು ತಾತ್ವಿಕ ದೃಷ್ಠಿಯಿಂದ ಲಿಂಗ-ಅಂಗ ರುಶಿಷ್ಯ-ಜಂಗಮ-ಭಕ್ತ ಇವರುಗಳ ಸಾಮರಸ್ಯ ಸಿದ್ಧಾಂತಕ್ಕೂ ಸಮತೆಯು ಧಕವಾಗಿರುವದು. ಆದರೆ ಈಗಿನಪ್ರಜಾಪ್ರಭುತ್ವ ಯುಗದಲ್ಲಿ ಪ್ರಚಾರದಲ್ಲಿರುವ ಮತಾವಾದಕ್ಕೂ ಶರಣರ ಸಮತಾವಾದಕ್ಕೂ ಅಜಗಜಾಂತರ ವ್ಯತ್ಯಾಸವಿರುವದು ಹಾಮಾನವತಾವಾದಿ, ಕ್ರಾಂತಿಪುರುಷ ಬಸವಣ್ಣನವರ ವಿಚಾರದಲ್ಲಿ ಸಮತೆಮೂಡಿ ರಬೇಕಾದರೆ, ಕಿಂಕರತೆ ಇದ್ದರೆ ಮಾತ್ರ ಸಾಧ್ಯ. ಕಿಂಕರತ್ವ ಇಲ್ಲದೆ ಶಂಕರನಾಗ ಯಸಿದರೆ ಸಮಾಜ ಅಂಕುಡೊಂಕಾಗಿ ಕಂಟಕಪ್ರವೃತ್ತಿ ಹುಟ್ಟಿ ಸಮಾಜದಲ್ಲಿ ಹ ಪ್ರಾಪ್ತಿಯಾಗುವದು. ಆದುದರಿಂದ ಜಗಜ್ಯೋತಿ ಬಸವಣ್ಣನವರು ಎಂದಂತೆ ನನಗಿಂತ ಕಿರಿಯರಿಲ್ಲ ಶಿವಭಕ್ತರಿಗಿಂತ ಹಿರಿಯರಿಲ್ಲ" ಎಂಬ ಅವರ ಮಾತೇ ಮಾಣ ಎಲ್ಲರಲ್ಲಿಯೂ ಸೇವಾಬುದ್ಧಿಯು (ಭೃತ್ಯಾಚಾರ) ಇರಬೇಕು. ಸಮಾಜದಲ್ಲಿ ಕ್ತನಾಗಿರಲಿ, ಗುರುವಾಗಿರಲಿ, ಜಂಗಮನಾಗಿರಲಿ, ಪ್ರಜೆಯಾಗಿರಲಿ, ತಿನಿಧಿಯಾಗಿರಲಿ, ಅವರಲ್ಲಿ ಭೃತ್ಯಾತೆಯು ನೆಲೆಗೊಂಡರೆ ಸಮತೆಯು ಸಹಜ ಾಗಿಯೇ ರೂಪುಗೊಳ್ಳುವದು. ಈ ವಿಚಾರವಾಗಿ ಯೋಚಿಸಿದರೆ ಈಗಿನ ಸಮತಾ ದವು ಮಾತಿನಲ್ಲಿರುವದಾಗಲಿ, ಕೃತಿಯಲ್ಲಿಯಾಗಲಿ ತೋರುವದಿಲ್ಲ. ಶರಣರ ಮತೆಯು ಭೃತ್ಯಾಚಾರದ ಕ್ರಿಯೆಯಲ್ಲಿ ಒಡಮೂಡುವದರಿಂದ ಶರಣರ ಸಮತಾ ದವು ಆದರ್ಶ ತತ್ವದಿಂದೊಡಗೂಡಿರುವದಾಗಿ ಕಂಡುಬರುವದು.

ಶರಣರ ಮತ್ತೊಂದು ಆದರ್ಶ ತತ್ವವೆಂದರೆ ಅಸ್ಪೃಶ್ಯತೆ. ಶರಣರ ದೃಷ್ಟಿಯಲ್ಲಿ ಸ್ಪೃಶ್ಯ ಅಸ್ಪೃಶ್ಯ ಪದವು ಅಂತ್ಯಜರಿಗೆ ಮಾತ್ರ ಸೀಮಿತವಾಗಿರಲಿಲ್ಲ. "ಕೊಲುವವನೇ ಮಾದಿಗ, ಹೊಲಸು ತಿಂಬುವವನೆ, ಹೊಲೆಯ" ಎಂಬ ನೈತಿಕತೆಯನ್ನು ಸೂಚಿಸುವ ಬಸವಣ್ಣನವರ ವಚನದಂತೆ ಹಿಂಸಾದಿ ಗುಣಗಳುಳ್ಳವರು ಅಭಕ್ಷ್ಯ ಭಕ್ಷಣವನ್ನು ಮಾಡತಕ್ಕವರು ಯಾವ ವರ್ಗದವರೇ ಆಗಿರಲಿ ಅವರೆಲ್ಲರನ್ನು ಶರಣರು ಅಸ್ಪೃಶ್ಯರೆಂದು ಭಾವಿಸಿದ್ದರು. ವರ್ಣಾಶ್ರಮ ದೃಷ್ಟಿಯಿಂದ ಅಂತ್ಯಜರೆನಿಸಿ ಕೊಂಡವರಲ್ಲಿ ಹಿಂಸಾದಿ ಗುಣಗಳಿಲ್ಲದೆ ಶಿವಭಕ್ತನೆಲೆಗೊಂಡಿದ್ದರೆ ಅವರಿಗೆ ವೀರಶೈವ ದೀಕ್ಷೆಯನ್ನು ಕೊಟ್ಟು ಅವರು ತಮ್ಮ ಸರಿಸಮಾನರೆಂದು ತಿಳಿದು ಅವರೊಡನೆ ಶರೀರ ಸಂಬಂಧ ಸಹಭೋಜನಾದಿಗಳನ್ನು ಮಾಡುತ್ತಿದ್ದರು ಎಂದರೆ "ದೇವ ದೇವಾ ಭಿನ್ನಪವನದಾರು ವಿಪ್ರ ಮೊದಲು ಅಂತ್ಯಜ ಕಡೆಯಾಗಿ ಶಿವಭಕ್ತರಾದವರನ್ನೆಲ್ಲಾ ನೊಂದೆ ಎಂಬೆ ಹಾರುವ ಮೊದಲು ಸ್ವಪಚ ಕಡೆಯಾಗಿ ಭವಿಯಾದವರನೊಂದೇ ಎಂಬೆ ಹೀಗೆಂದು ನಂಬುವದನ್ನ ಮನವು" ಎಂಬ ಬಸವಣ್ಣನವರ ವಚನದಂತೆ ಶರಣರು ಮಾತಿನಲ್ಲಿ ಮನೆ ಕಟ್ಟಿ ಕೊನೆಗೊಳಿಸದೇ ಕೃತಿಯಲ್ಲಿ ನೆಲೆಗೊಳಿಸಿದರು. ಶರಣರು ಸಮಾಜ ರಚನೆಯ ದೃಷ್ಟಿಯಿಂದ ಹಿಂಸಾದಿ ಗುಣಗಳುಳ್ಳವರನ್ನು ಭವಿಗಳೆಂದೂ ಆ ಭವಿಗಳೇ ಅಸ್ಪೃಶ್ಯರೆಂದು ಕರೆಯುತ್ತಿದ್ದರು. ಈ ರೀತಿ ಭವಿತ್ವವನ್ನು ಕಳೆದುಕೊಳ್ಳ ಬೇಕೆಂದು ಬಯಸಿದವರಿಗೆ ಸಮಾನ ದೀಕ್ಷೆಯನ್ನು ಕೊಟ್ಟು ತಮ್ಮ ಸರಿಸಮಾನರಾದ ಭಕ್ತರೆಂದು ಭಾವಿಸಿ ಅವರೊಡನೆಕೂಡಿ ಸಾಮಾಜಿಕ ವ್ಯವಹಾರಗಳನ್ನು ಮಾಡುತ್ತಿದ್ದರು.

ಭುವಿಯ ಭಾಗ್ಯ ವಿಶೇಷವಾಗಿ ಬಾಳಿಬೆಳಗಿದ ಶರಣರು ಹಿಂದಿನ, ಈಗಿನ ಹಾಗೂ ಮುಂದಿನ ಜನಾಂಗ ಎಂದೆಂದೂ ಮರೆಯದಂತಹ ಒಂದು ಶೀಲವಂತ ಸಮಾಜ ನಿರ್ಮಾಣಕ್ಕೆ ಭದ್ರ, ನೈತಿಕ, ಆಧ್ಯಾತ್ಮಿಕ, ಪರಂಪರೆಯನ್ನು ಬಿಟ್ಟು ಹೋಗಿದ್ದಾರೆ. ಇಂತಹ ಉಜ್ವಲವಾದ ಪರಂಪರೆಯ ತಳಹದಿಯಮೇಲೆ ಬೆಳೆಯ ಬೇಕಾದ ಜನಾಂಗ ಇಂದು ಶರಣರ ಮಾರ್ಗದಿಂದ ಬಹು ದೂರ ಸರಿದಿದೆ. ಬದಲಾಗಿ ಇಂದು ಸ್ವಾರ್ಥಿಗಳೂ, ಸಮಯಸಾಧಕರೂ, ಸಮಾಜದಲ್ಲಿ ತುಂಬಿ ಮಾನವೀಯ ಮೌಲ್ಯಗಳಿಗೆ ಸವಾಲಾಗಿ ನಿಂತಿದ್ದಾರೆ ಸ್ವಾರ್ಥವೇ ಸಮಾಜವನ್ನು ಆಳತೊಡಗಿದೆ. ಉದಾತ್ತ ಹಾಗೂ ಆದರ್ಶ ತತ್ವಗಳು ಮರೆಯಾಗಿವೆ. ಶರಣರ ಸಮತಾವಾದಸಮಾಜ ಈಗ ಬರಿಕಲ್ಪನೆಯಾಗಿ ಉಳಿದಿದೆ.

# ಅಕ್ಕನಾಗಮ್ಮನ ವಚನಾಮೃತ

ಕನ್ನಡ ಕವಿ " ಕಾಳಿದಾಸ "ಮೋಟಗಿ ಮಲ್ಲಿಕಾರ್ಜುನ, ಅಥಣಿ, ಬೆಳಗಾವಿ ಜಿಲ್ಲೆ.

ಅಕ್ಕನಾಗಮ್ಮ ಅಥವಾ ನಾಗಲಾಂಬಿಕೆ ಇವಳ ಪತಿ ಶಿವಸ್ವಾಮಿ. ನಾಗಲಾಂಬಿಕೆ ಸವಣ್ಣನವರಿಗೆ ಅಕ್ಕಳಾದ್ದರಿಂದ ಅಕ್ಕನಾಗಮ್ಮ ಎಂದು ಕರೆದುದು. ಕಲ್ಯಾಣ ಕ್ರಾಂಯ ಸಮಗ್ರ ಇತಿಹಾಸದಲ್ಲಿ ಆರಂಭದಿಂದ ಕೊನೆಯವರೆವಿಗೂ ಅಕ್ಕನಾಗಮ್ಮನ ಾತ್ರ ಅತ್ಯಂತ ಮಹತ್ವಪೂರಿತವಾಗಿದೆ. ಬಸವಣ್ಣನವರ ಬಾಲ್ಯದಿಂದಲೂ ಅವರ ಂಗಾತಿಯಾಗಿದ್ದು ಮಾರ್ಗದರ್ಶಕಳಾಗಿ ಅವರ ದಿವ್ಯ ಭವ್ಯ ಧಾರ್ಮಿಕ ಭಕ್ತಿ ಜೀವ ಕ್ಕೆ ಕಾರಣ ಕರ್ತಳಾದವಳೆಂದರೆ ಈ ನಾಗಲಾಂಬಿಕೆಯೇ. ಈಕೆಯು ಮಹಾಜ್ಞಾನಿ ಾಗಿದ್ದಂತೆ ಶಿವಯೋಗವನ್ನು ಬಲ್ಲವಳಾಗಿದ್ದಳು. ಅಂತೆಯೇ ನಾಗಲಾಂಬಿಕೆ ೋಗಿಣಿಯೆನಿಸಿದ್ದಳು. ಬಸವನ ಬಾಗೇವಾಡಿ ಹತ್ತಿರದ ಇಂಗುಳೇಶ್ವರಗ್ರಾಮದಲ್ಲಿ ಕೆಯು ತಪಸ್ಸುಮಾಡಿದ 'ನಾಗಲಾಂಬಿಕೆ ಗುಹೆ' ಎಂಬುದು ಈಗಲೂ ಇದೆ. ಆ ಹೆಯಲ್ಲಿ ನಾಗಲಾಂಬಿಕೆಯ ವಿಗ್ರಹ ಉಂಟು. ಹಾಗೆಯೇ ಕಲ್ಯಾಣದಲ್ಲಿಯೂ ಂದು ನಾಗಮ್ಮನ ಗವಿಯುಂಟು. ಬಸವಣ್ಣನವರು ಕಲ್ಯಾಣವನ್ನು ತೊರೆದು ಸಂಗ ಕ್ಕೆ ಹೋದ ನಂತರವೂ ಕಿನ್ನರಿ ಬ್ರಹ್ಮಯ್ಯ, ಮಡಿವಾಳ ಮಾಚಯ್ಯ, ಗಂಗಾಂಬಿಕೆ ನ್ನಬಸವಣ್ಣ ಮೊದಲಾದ ಶರಣರೊಡನಿದ್ದು ಕಲ್ಯಾಣದಿಂದ ಉಳಿವೆಯ ಮಹಾರ ದ ಮಹಾಮನೆಯವರೆವಿಗೂ ನಡೆದ ಘನಘೋರಕಾಳಗದಲ್ಲಿ ಸಾಂತ್ವನ ಶಕ್ತಿ ತನ ಸ್ವರೂಪಳಾಗಿ ನಿಂತು ಕೊನೆಗೆ ಲಿಂಗೈಕ್ಯಳಾದವಳು ಅಕ್ಕನಾಗಮ್ಮ. ಬಿಜ್ಜಳನ ನ್ಯ ಅಲ್ಲಿಯವರೆಗೂ ಶರಣರೊಡನೆ ಯುದ್ಧಮಾಡುತ್ತ ಬಂದುದಾಗಿದೆ. ಎಲ್ಲ ಶರಣರು ಮ್ಮ ತಮ್ಮ ನಿರ್ಧರಿತ ಸ್ಥಳಗಳಲ್ಲಿ ಬಯಲಾಗಿ ಹೋಗಿದ್ದಾರೆ. ಪ್ರಸ್ತುತ ದೊರೆತ ಕ್ಕನಾಗಮ್ಮನ 12 ವಚನಗಳಿಲ್ಲಿವೆ.

ಶ್ರೀ ಗುರುವೆ ತಾಯಿ ತಂದೆಯಾಗಿ, ಲಿಂಗವೆ ಪತಿಯಾಗಿ, ಜಂಗಮವೆ ಅತ್ತೆಮಾವಂ ರಾಗಿ, ಶಿವಭಕ್ತರೆ ಬಾಂಧವರಾಗಿ ಸತ್ಯ ಸದಾಚಾರವೆಂಬ ಮನೆಗೆ ಕಳುಹಿದರಾಗಿ ಣ ಸತಿಯೆಂಬ ನಾಮ ನಿಜವಾಯಿತ್ತು. ಅದರಂತೆ ಇರುವೆ, ಹಿಂದು ಮುಂದರಿಯದೆ ನಡೆವೆ. ಮನಕ್ಕೆ ಸಾಕ್ಷಿಯಾಗಿ ಮಾಡುವೆ. ಬಸವಣ್ಣ ಪ್ರಿಯ ಚನ್ನಸಂಗಯ್ಯ, ನಿಮ್ಮಡಿಗಳಿಗೆ"

"ಮನದೊಡೆಯ ಮಹಾದೇವ ಮನವ ನೋಡಿಹೆನೆಂದು, ಮನುಜರ ಕೈಯಿಂದ ದೊಂದು ನುಡಿಸುವನು. ಇದಕ್ಕೆ ಕಳವಳಿಸದಿರು ಮನವೆ, ಕಾತರಿಸದಿರು ತನುವೆ, ವ ಮರೆಯದಿರು ಕಂಡಾ, ನಿಶ್ಚಿಂತನಾಗಿರು ಮನವೆ. ಬಸವಣ್ಣಪ್ರಿಯ ಚನ್ನಸಂಗ ಯನು ಬೆಟ್ಟದನಿತಪರಾಧವನು ಒಂದು ಬೊಟ್ಟಿನಲ್ಲಿ ತೊಡೆವನು."

3) "ಅರಿಯದೆ ಮರಹಿಂದೆ ಭವದಲ್ಲಿ ಬಂದೆನಲ್ಲದೆ. ಇನ್ನು ಅರಿದ ಬಳಿಕ ಬಳಲುಂಟೆ?
ಹೃದಯಕಮಲ ಮಧ್ಯದಲ್ಲಿ ನಿಜವು ನೆಲೆಗೊಂಡ ಬಳಿಕ, ಪುಣ್ಯಪಾಪವೆಂಬವಕ್ಕೆ ಹೊರಗಾದೆನು. ಭುವನ ಹದಿನಾಲ್ಕರೊಳಗೆ ಪರಿಪೂರ್ಣ ನಿರಂಜನಜ್ಯೋತಿಯಾಗಿ ಬೆಳಗುವ ಪ್ರಭುವ ಕಂಡು ಬದುಕಿದೆನು ಕಾಣಾ, ಬಸವಣ್ಣಪ್ರಿಯ ಚನ್ನಸಂಗಯ್ಯಾ.

4) "ಗುರುಸಂಬಂಧಿ ಗುರುಭಕ್ತಯ್ಯನು ಲಿಂಗ ಸಂಬಂಧಿ ಪ್ರಭುದೇವರು. ಜಂಗಮ ಸಂಬಂಧಿ ಸಿದ್ಧರಾಮನು. ಪ್ರಸಾದ ಸಂಬಂಧಿ ಮರುಳಶಂಕರ ದೇವರು. ಪ್ರಾಣಲಿಂಗ ಸಂಬಂಧಿ ಅನಿಮಿಷದೇವರು ಶರಣ ಸಂಬಂಧಿ ಘಟ್ಟಿವಾಳಯ್ಯನು. ಐಕ್ಯಸಂಬಂಧಿ ಅಜಗಣ್ಣಯ್ಯನು. ಸರ್ವಾಚಾರ ಸಂಬಂಧಿ ಚನ್ನಬಸವಣ್ಣನು. ಇಂತಿವರ ಸಂಬಂಧ ಎನ್ನ ಸರ್ವಾಂಗದಲ್ಲಿ ನಿಂದು ಬಸವಣ್ಣಪ್ರಿಯ ಚನ್ನಸಂಗಯ್ಯನು ಹೃದಯಕಮಲದಲ್ಲಿ ನಿಜನಿವಾಸಿಯಾಗಿದ್ದೆನು."

5) "ಎನ್ನತನು ಚನ್ನಬಸವಣ್ಣನ ಬಯಲ ಬೆರಸಿತ್ತು. ಎನ್ನ ಮನ ಸಂಗನ ಬಸವಣ್ಣನ ನಿಜಪದವ ಬೆರಸಿತ್ತು. ಎನ್ನಪ್ರಾಣ ಅಲ್ಲಮಪ್ರಭುದೇವರ ಅರಿವ ಬೆರಸಿತ್ತು. ಇಂತೀ ಮೂವರು ಒಂದೊಂದು ಹಂಚಿಕೊಂಡ ಕಾರಣ, ಎನಗೇನೂ ಇಲ್ಲದೆ, ಬಸವಣ್ಣಪ್ರಿಯ ಚನ್ನಸಂಗಯ್ಯನು ಹೃದಯಕಮಲದಲ್ಲಿ ನಿಜನಿವಾಸಿಯಾಗಿದ್ದೆನು"

6) "ಎನ್ನ ಭವದ ಬಳ್ಳಿಯಬೇರು ಹರಿಯಿತ್ತಯ್ಯಾ, ಸಂಗನ ಬಸವಣ್ಣನ ಒಕ್ಕುದ ಕೊಂಡೆನಾಗಿ. ಎನ್ನಮನದ ಕಪಟ ಹಿಂಗಿತ್ತಯ್ಯಾ, ಚನ್ನಬಸವಣ್ಣನ ಕರುಣವ ಪಡೆದೆನಾಗಿ. ಎನ್ನಂತರಂಗದ ಸಂದು ಸಂಶಯ ತೊಲಗಿತ್ತೆಂದು ಬಸವಣ್ಣಪ್ರಿಯ ಚನ್ನ ಸಂಗಯ್ಯನಲ್ಲಿ ಎನ್ನ ಪರಮಗುರು ಅಲ್ಲಮ ಪ್ರಭುದೇವರ ಶ್ರೀ ಚರಣವಕಂಡೆನಾಗಿ."

7) "ಆಚಾರವೆಂಬುದು ಅಗೋಚರ ನೋಡಯ್ಯಾ, ಆರಿಗೆಯೂಸಾಧ್ಯವಲ್ಲ. ಮರ್ತ್ಯ ಲೋಕದಲ್ಲಿ ಆ ಸದಾಚಾರದ ಬೆಳವಿಗೆಯ ಮಾಡಲೆಂದು ಬಸವಣ್ಣ ಬಂದು ಭಕ್ತಿ ಸ್ಥಲವ ಹರಹಿದ. ಗುರುಲಿಂಗ ಜಂಗಮ ದಾಸೋಹ ಪಾದೋದಕ ಪ್ರಸಾದದ ಹಾದಿಯನೆಲ್ಲರಿಗೆ ತೋರಿದ. ಶಿವಾಚಾರದ ಬೆಳವಿಗೆಯ ಘನವನಹುದಲ್ಲವೆಂದು ಬಿಜ್ಜಳ ತರ್ಕಿಸಲು ಅನಂತ ಮುಖದಿಂ ಒಡಂಬಡಿಸಿದ ಅಹುದೆನಿಸಿದ. ಬಂದ ಮಣಿಹ ಪೂರೈಸಿತ್ತೆಂದು ಲಿಂಗದೊಳಗೆ ಬಗಿದು ಹೊಕ್ಕಡೆ ಹಿಂದೆ ಲೋಕವರಿದು ಬದುಕ ಬೇಕೆಂದು ಸೆರಗಕೊಟ್ಟ. ನಾನು ಹಿಂದುಳಿದಹಳೆಂದು ಮುಂದಣಗತಿಯ ತೋರಿ, ಬಸವಣ್ಣಪ್ರಿಯ ಚನ್ನಸಂಗಯ್ಯನಲ್ಲಿ ತನ್ನ ಪ್ರಸನ್ನದೊಳಗೆ ಇಂಬಿಟ್ಟು ಕೊಂಡನು, ಎನ್ನ ಹೆತ್ತ ತಂದೆ ಸಂಗನ ಬಸವಣ್ಣನು"

ಬಸವನೆ ಮುಖಸೆಜ್ಜೆ, ಬಸವನೆ ಅಮಳೋಕ್ಯ, ಬಸವನ ನಾನೆತ್ತಿ ಮುದ್ದಾಡಿ
. ಬಸವಾ, ಸಂಗನ ಬಸವದೇವಾ ಜಯತು. ಬಸವಾ, ಸಂಗನ ಬಸವಲಿಂಗಾ
ತು. ಬಸವಗೂ ಎನಗೂ ಭಾವಭೇದವಿಲ್ಲ; ಬಸವಗೂ ಎನಗೂ ರಾಸಿಕೂಟ
. ಬಸವಪ್ರಿಯ ಚನ್ನಸಂಗಯ್ಯನಲ್ಲಿ ಬಸವನ ಬೆಸಲಾದ ಬಾಣತಿ ನಾನಯ್ಯಾ,
! ಬಸವಾ! ಬಸವಾ! "

ಎನ್ನ ಕುಲಸೂತಕವ ಕಳೆದಾತ ಬಸವಣ್ಣ. ಎನ್ನ ಛಲ ಸೂತಕವ ಕಳೆದಾತ
ವಣ್ಣ. ಎನ್ನ ತನು ಸೂತಕವ ಕಳೆದಾತ ಬಸವಣ್ಣ. ಎನ್ನ ಮನಸೂತಕವ
ತ ಬಸವಣ್ಣ. ಎನ್ನ ನೆನಹುಸೂತಕವ ಕಳೆದಾತ ಬಸವಣ್ಣ. ಎನ್ನ ಭಾವಸೂತ
ಕಳೆದಾತ ಬಸವಣ್ಣ. ಎನ್ನ ಅರುಹುಮರಹಿನ ಸಂದು ಸಂಶಯವ ಬಿಡಿಸಿದಾತ
ವಣ್ಣ. ಎನ್ನ ತನ್ನೊಳಗೆ ಇಂಬಿಟ್ಟುಕೊಂಡಾತ ಬಸವಣ್ಣ ತನ್ನ ಎನ್ನೊಳಗೆ
ಟ್ಟುಕೊಂಡಾತ ಬಸವಣ್ಣ. ನಿಜದ ನಿರ್ವಯಲ ಬಾಗಿಲ ನಿಜವ ತೋರಿದಾತ
ಣ್ಣ. ಬಸವಣ್ಣಪ್ರಿಯ ಚನ್ನಸಂಗಯ್ಯನ ಹೃದಯಕಮಲದಲ್ಲಿ ನಿಜನಿವಾಸಿಯಾಗಿ
ಎನ್ನ ತಂದೆ ಸಂಗನ ಬಸವಣ್ಣ. "

ಬಸವಣ್ಣಾ, ನೀವು ಮರ್ತ್ಯಕ್ಕೆ ಬಂದು ನಿಂದಡೆ, ಭಕ್ತಿಯ ಬೆಳವಿಗೆ ದೆಸೆದೆಸೆಗೆ
ಸಿಸಿತ್ತಲ್ಲಾ. ಅಯ್ಯಾ, ಸ್ವರ್ಗ ಮರ್ತ್ಯ ಪಾತಾಳದೊಳಗೆಲ್ಲಾ ನಿಮ್ಮ ಭಕ್ತಿಯ
ಯ ಘನವನಾರು ಬಲ್ಲರು! ಅಣ್ಣಾ, ಶಶಿಧರನಟ್ಟಿದ ಮಣಿಹ ಪೂರೈಸಿತ್ತೆಂದು
ಲಿಂಗೈಕ್ಯವಾದಡೆ ನಿಮ್ಮೊಡನೆ ಭಕ್ತಿ ಹೋಯಿತ್ತಯ್ಯಾ. ನಿಮ್ಮೊಡನೆ ಸದಾಚಾರ
ೕಯಿತ್ತಯ್ಯಾ. ನಿಮ್ಮೊಡೆನೆ ಅಸಂಖ್ಯಾತ ಮಹಾಗಣಂಗಳು ಹೋದರಣ್ಣಾ.
ರ್ಗಲೋಕದ ಮಹಾಮನೆ ಬಸವಣ್ಣ! ಬಸವಣ್ಣಪ್ರಿಯ ಚನ್ನಸಂಗಯ್ಯಂಗೆ
ಪ್ರಾಣಲಿಂಗವಾಗಿ ಹೋದೆಯಲ್ಲಾ ಸಂಗನ ಬಸವಣ್ಣಾ!"

ಭಕ್ತಿಯ ತವನಿಧಿಯೆ ಬಸವಾ, ಮುಕ್ತಿಯ ಮೂರುತಿಯೆ ಬಸವಾ
ಲಿಂಗ ಜಂಗಮದ ಚೈತನ್ಯವೆ ಬಸವಾ, ನಿಮ್ಮನಗಲಿಯಾನೆಂತು ಸೈರಿಸುವೆನು,
ಅಯ್ಯಾ ಬಸವಾ? ಎಲೆ ಪರಮಗುರುವೆ ಬಸವಾ, ಆಹಾ!ಎನ್ನಂತರಂಗದ
ಜ್ಯೋತಿಯೆ ಬಸವಾ, ನಿಮ್ಮ ಒಕ್ಕಮಿಕ್ಕ ಶೇಷಪ್ರಸಾದವನಿಕ್ಕಿ
ಎನ್ನ ಪಾವನಮಾಡಿ ಉಳುಹಿದೆಯಲ್ಲಾ ಬಸವಲಿಂಗವೆ!
ಎನಗಿನ್ನಾರು ಗತಿಮತಿ ಹೇಳಯ್ಯಾ ಬಸವಣ್ಣಾ ನೀವಲ್ಲದೆ? ಬಸವಣ್ಣ
ಚನ್ನಸಂಗಯ್ಯ, ನೀವಗಲಿದಡೆ ಎನ್ನ ಪ್ರಾಣ ನಿಮ್ಮೊಳಗಗಲಬಲ್ಲುದೆ ಬಸವಾ?
ಅಯ್ಯಾ, ನಾನಧವೆ, ಅಯ್ಯಯ್ಯಾಕೈಯ ಕೋಲ ಕೊಂಬರೆ?
ಅಯ್ಯಾ, ಎಳೆಗರುವಿನ ಎಳೆಗಂತಿಯನೆಳೆದೊಯ್ವರೆ ಭಕ್ತರು?
ಅಯ್ಯೋ ಅಯ್ಯೋ ಎನಲೊಯ್ವರೆ ಬಸವಣ್ಣಪ್ರಿಯ ಚನ್ನಸಂಗಯ್ಯಾ?"

# ಕರ್ತವ್ಯ ಕರ್ಮವೇ ದೇವರತ್ತೊಯ್ಯುವುದು

– ಎಂ. ಮಾಧವ ಪೈ, ನಿವೃತ್ತ ಪ್ರಾಂಶುಪಾಲರು, "ಶ್ರೀನಿವಾಸ" ಪ್ರೌಢಶಾಲೆ,
ಮೈದಾನದ ಸಮೀಪ, ವಿನೋಬನಗರ, ಶಿವಮೊಗ್ಗ-5772101

ಭಗವಂತನ ಕಾಣ್ಕೆಗಾಗಿ ಆಧ್ಯಾತ್ಮಿಕ ಅನ್ವೇಷಣೆಯಸಾಧಕನಾದವನು ತಾನ ಅಂತರ್ಮುಖಿಯಾಗಿ ಆ ಸಚ್ಚಿದಾನಂದ ಸ್ವರೂಪವನ್ನು ಕಾಣುವ ಪ್ರಯತ್ನದಲ್ಲಿ ತೊಡಗಬೇಕೇ ಹೊರತು, ಅವನು ಬಾಹ್ಯಿಕ ಯಾವ ಚಟುವಟಿಕೆಗಳಲ್ಲೂ ತೊ ಬಾರದು ಎಂಬುದು ಸಾಧನಾಪಥದ ಒಂದು ನಿಯಮವಾಗಿತ್ತು ಏಕೆಂದರೆ ಅದ ಭಗವಂತನನ್ನು ಕಾಣುವ ಅಥವ ಪಡೆಯುವ ಉದ್ದೇಶವೇ ಮುಖ್ಯವಾಗಿರುವುದರಿಂ ಮನಸ್ಸನ್ನೆಲ್ಲವನ್ನೂ ಅದರ ಮೇಲೆಯೇ ಕೇಂದ್ರೀಕರಿಸಬೇಕು. ಹಾಗೆ ಮಾಡದೆ, ಬಾ ಕೆಲಸದಲ್ಲಿ ತನ್ನ ಶ್ರಮವನ್ನು ಶಕ್ತಿಯನ್ನು ಬಳಸಿದರೆ ಗುರಿ ತಪ್ಪುವುದು. ಕಾರ ವೇನೆಂದರೆ ಪರಂಜ್ಯೋತಿಯತ್ತ ತಿರುಗಿ ನಿಶ್ಚಲ ಧ್ಯಾನಾಸಕ್ತಸ್ಥಾಯಿಯಲ್ಲಿ ನೆಲಸಿ ಜೀವಿಯು ಆ ಸ್ಥಿತಿಯನ್ನು ತೊರೆದು ಜಗತ್ತಿನ ಯಾವುದೇ ಕಾರ್ಯದಲ್ಲಿ ತೊಡಗು ದೆಂದರೆ ಅಜ್ಞಾನದ ಸೀಮೆಯನ್ನು ಹೊಕ್ಕಂತೆಯೇ ಸರಿ ಈ ಸೀಮೆಯ ಯಾವುದಾದರೊಂದು ಕ್ರಿಯೆಯಲ್ಲಿ ತೊಡಗಿದರೆ ಅದಕ್ಕೆ ಪ್ರತಿಕ್ರಿಯೆ ಅನಿವಾಯ ಪ್ರತಿಕ್ರಿಯೆಯು ಮತ್ತೊಂದು ಕ್ರಿಯೆಗೆ ಪೀಠಿಕೆಯಾಗುವುದು. ಹೀಗೆ ಕ್ರಿಯೆ-ಪ್ರ ಕ್ರಿಯೆ ಮಗದೊಂದು ಕ್ರಿಯೆಯಿಂದಾಗಿ ಕರ್ಮಜಾಲವೇ ಏರ್ಪಡುವುದು. ಇದರಿಂ ಜೀವನದಿಂದ ವಿಮುಕ್ತನಾಗುವ ಬದಲು ಸಾಧಕನು ಹೊಸದೊಂದು ಬಂಧ ಪರಂಪರೆಯಲ್ಲಿ ಸಿಲುಕಿಕೊಳ್ಳುವನು. ಈ ಕಾರಣದಿಂದ ಆಧ್ಯಾತ್ಮಿಕ ಅನ್ವೇಷ ಮಾಡುವವನು ಸಕಲ ಕಾರ್ಯಗಳಿಂದ ಹೊರಗುಳಿಯುವುದು ಅತ್ಯಗತ್ಯ ಎಂಬ ಭಾವ ಬಲವಾಗಿತ್ತು.

ಆದರೆ ಮಹರ್ಷಿ ಅರವಿಂದರು ಅಂಥ ಸಾಧನೆಯು ಪರಿಪೂರ್ಣವಾಗಲಾರದಷ್ಟೇ ಅ ತನ್ನ ಸಾಧನೆಯ ಫಲವನ್ನು ಅವನು ಬಾಹ್ಯದಲ್ಲಿ ಬಳಸದವನಾಗಿ, ಭೌತಿಕ ಪ್ರಪಂಚ ಯಾವ ಒಳಿತನ್ನು ಮಾಡಲು ಅಸಮರ್ಥನಾಗುತ್ತಾನೆ ಎಂದು ಭಾವಿಸುತ್ತಾ ಜೊತೆಗೆ ಎಲ್ಲ ಕಾರ್ಯಗಳಿಂದ ನಿವೃತ್ತನಾಗುವುದು ಯಾರಿಗಾದರೂ ಸಾಧ್ಯವೆ ಎಂಬುದು ವಿಚಾರಾರ್ಹ. ಉಸಿರು ಹೊತ್ತ ಯಾವ ಜೀವಿಗೂ ಕ್ರಿಯೆ ಸಲ್ಲಿಸ ಇರಲಾಗುವುದಿಲ್ಲ ಎಂದು ಭಗವದ್ಗೀತೆಯು ಸಾರಿ ಸಾರಿ ಹೇಳುತ್ತದೆ. ಹೀಗಾ ಕರ್ಮವಿರಹಿತರಾಗಿ ಆಧ್ಯಾತ್ಮಿಕ ಅನ್ವೇಷಣಕ್ಕಾಗಿ ಶ್ರಮಿಸುವುದೆಂದರೆ ಅದ ಅಪೂರ್ಣ ಸಾಧನೆಯೇ ಸರಿ. ಆಧ್ಯಾತ್ಮಿಕ ಅನುಭವಗಳ ಸಲುವಾಗಿ ಕರ್ಮವನ ಅರ್ಥಾತ್ ಬಾಹ್ಯ ಪ್ರಜ್ಞೆಯನ್ನು ಅಲಕ್ಷಿಸಿ ಸಂಪೂರ್ಣ ಅಂತರ್ಮುಖರಾದರೆ ಸಾಧನೆ-ಯಲ್ಲಿ ತೂಕ ತಪ್ಪಿದವರೂ ಏಕದೇಶೀಯ ಸ್ಥಿತಿಗೆ ಮುಟ್ಟಿದವರೂ ಆಗುವೆವು.

ಸಾಮಾನ್ಯವಾಗಿ ಯಾವ ಕರ್ಮವೇ ಆಗಲಿ ಮಾಡುವಾಗ ಯಾವುದೊ ಒಂದು ಕಾಮನೆ ಫಲಾಪೇಕ್ಷೆಯಿಂದ ಮಾಡಲಾಗುತ್ತದೆ. ವಾಸ್ತವಿಕವಾಗಿ ಕಾಮನೆ

ಮನುಷ್ಯನನ್ನು ಕಾರ್ಯಕ್ಕೆ ಪ್ರೇರೇಪಿಸುವುದು. ತನ್ನಲ್ಲಿಲ್ಲದುದನ್ನು ಪಡೆಯಲು ಅಥವಾ ಅಲ್ಪ ಪ್ರಮಾಣದಲ್ಲಿದ್ದುದನ್ನು ಹೆಚ್ಚಿಸಲು ಅಪೇಕ್ಷಿಸಿ ಕಾರ್ಯ ಪ್ರವೃತ್ತನಾಗುವುದೇ ಹೆಚ್ಚು. ಈ ಕಾಮನೆಯಷ್ಟೇ ಪ್ರಬಲವಾದ ಇನ್ನೊಂದು ಅಂಶ ಅಹಂ ಎಂಬುದು ಈ ಅಹಂಭಾವನೆಯು ಸ್ವಪ್ರತಿಷ್ಠೆ, ಸ್ವಪ್ರಕಟಣೆಯ ನಿಮಿತ್ತ ಮನುಷ್ಯನನ್ನು ಕಾರ್ಯದಲ್ಲಿ ತೊಡಗಿಸುತ್ತದೆ. ಕಾಮನೆ ಹಾಗೂ ಅಹಂ ಈ ಎರಡು ಚಕ್ರಗಳ ಮೇಲೆ ಕರ್ಮರಥ ಉರುಳುವುದು. ಆಧ್ಯಾತ್ಮಿಕ ಅನ್ವೇಷಕನು ಪ್ರತಿಯೊಂದು ಕ್ರಿಯೆಯ ಹಿಂದಿರುವ ಈ ಸ್ವಾರ್ಥಕಾಮನೆ ಹಾಗೂ ಪ್ರೇರಕ-ಅಹಂ ಎಂಬಿವುಗಳನ್ನು ದೂರಗೊಳಿಸಿ ಶುದ್ಧ ಹೇತುವನ್ನು ಅವಲಂಬಿಸಿ ಆ ಮೂಲಕ ಕ್ರಿಯೆಯನ್ನು ಕಳಂಕರಹಿತ ಮಾಡ-ಬಹುದು. ಅದಕ್ಕಾಗಿ ನಾವು ಆಂತರಿಕ ಅನುಭವ ಹಾಗೂ ಬಾಹ್ಯಿಕ ಕರ್ಮ ಇವೆರಡ ರಲ್ಲಿಯೂ ಒಂದೇ ಪ್ರಜ್ಞೆಯುಳ್ಳವರಾಗಬೇಕು. ಇಷ್ಟೇ ಅಲ್ಲದೆ ಕರ್ಮದ ಸಾಧನೆಯನ್ನು ಪರಮಾತ್ಮನಿಗಾಗಿ ಮೀಸಲಾಗಿಡತಕ್ಕದ್ದು. ಯಾವುದೇ ಕಾರ್ಯವು ದಕ್ಷತೆಯಿಂದಲೂ ಎಚ್ಚರಿಕೆಯಿಂದಲೂ ಪರಮಾತ್ಮನಿಗೆ ಯಜ್ಞರೂಪವಾಗಿ, ವಾಸನೆಯು ಅಹಂಕಾರವೂ ಇಲ್ಲದೆ, ಸುದೈವ-ದುರ್ದೈವಗಳಲ್ಲಿ ಧೀರ ಸಮಚಿತ್ತತ್ವ ಹಾಗೂ ಮನದ ಸಮತೆ ಇವುಗಳಿಂದ ಕೂಡಿ ಮತ್ತು ಯಾವುದೇ ವೈಯಕ್ತಿಕ ಲಾಭ ಇಲ್ಲವೆ ಫಲಪರಿಣಾಮಗಳ ಉದ್ದೇಶವಿಲ್ಲದೆ ಕೇವಲ ಪರಮಾತ್ಮನ ಉದ್ದೇಶದ ಸಲುವಾಗಿ ಹಾಗೂ ಮಾಡುವ ಪ್ರತಿಯೊಂದು ಕರ್ಮವೂ ಭಗವಂತನಿಗೆ ಸಂಬಂಧಿಸಿದವುಗಳಾಗಿವೆಯೆಂಬ ಪ್ರಜ್ಞೆಯಿಂದೊಡಗೂಡಿ ಆಚರಿಸಿದರೆ, ಇಂಥ ಕರ್ಮವೇ-ಕರ್ಮ ಮೂಲಕವಾಗಿ ಆತ್ಮ ಸಮರ್ಪಣೆಯನ್ನು ಸಾಧಿಸುವುದಕ್ಕೆ ಸಾಧನೀಭೂತವಾಗುವುದು. ಎಂದು ತಿಳಿಸುತ್ತ ಅರವಿಂದರು ಹೇಳುತ್ತಾರೆ. ಯಾರ ಸರ್ವಪ್ರಕಾರದಿಂದಲೂ ಯಥಾರ್ಥ ಹೃದಯದಿಂದ ಜಗನ್ಮಾತೆಗಾಗಿ ಮಾಡು ವರೋ ಅವರು ಧ್ಯಾನಕ್ಕೆ ಕೂಡದೆಯೂ ಯಾವ ವಿಶಿಷ್ಟ ಯೋಗ ಸಾಧನೆಗಳನ್ನು ಮಾಡದೆಯೂ ಸಹ ಆ ಕರ್ಮಮೂಲಕವಾಗಿಯೇ ಉಚಿತಪ್ರಜ್ಞೆಯ ಸ್ಥಿತಿಗೆ ಸಿದ್ಧತೆ-ಯನ್ನು ಮಾಡಿಕೊಳ್ಳುವರು." ಅಂದರೆ ನಮ್ಮ ನಿಷ್ಕಾಮ ಕರ್ಮವೇ ನಮ್ಮನ್ನು ಭಗವಂತನನ್ನು ಕಾಣಲು ಸಹಾಯಕವಾಗುವುದು. ಬಸವಣ್ಣನವರ ಕಾಯಕ ಸಿದ್ಧಾಂತದ ಅಂತರಾರ್ಥವೂ ಇದೇಯಲ್ಲವೆ! ಕರ್ಮವೆಂಬುದು ಭಗವಂತನಿಂದ ನನಗೆ ಪ್ರೇರೇಪಿಸಲ್ಪಟ್ಟದ್ದು. ಅದನ್ನು ಭಗವಂತನಿಗಾಗಿಯೇ ನಾನು ಮಾಡ ಬೇಕಾದದ್ದು; ಅದರ ಫಲವೂ ಭಗವಂತನಿಗೇನೇ ಸಂದುದುಎಂಬ ನಿಷ್ಠೆಯಿಂದ ಕರ್ಮ ಮಾಡುತ್ತಿದ್ದರೆ ಅದರಿಂದ ಯಾವ ಗಂಟು ಅಂಟಿಕೊಳ್ಳದು ಹಾಗೆ ಕಾರ್ಯ ಮಾಡು ವಾಗ ನಮ್ಮಲ್ಲಿಯ ಕಾಮ, ಕ್ರೋಧ, ಲೋಭ ಮೋಹ, ಮದ, ಮತ್ಸರಗಳ ಯಾವ ವಿಕಾರಗಳಿಗೂ ಒಳಗಾಗಿ ಮಾಡುತ್ತಿಲ್ಲ ತಾನೆ ಎಂದು ಆಲೋಚಿಸಿ, ಒಂದು ವೇಳೆ ಹಾಗಾಗುತ್ತಿದ್ದರೆ ಆ ವಿಕಾರವನ್ನು ಕಿತ್ತೊಗೆದು ಕಾರ್ಯದಲ್ಲಿ ನಿರತನಾದರೆ ಆ ಕಾರ್ಯವೇ ಭಗವಂತನನ್ನು ಕಾಣಲು ಸಂಪೂರ್ಣ ಸಹಕಾರಿಯಾಗುವುದರಲ್ಲಿ ಅನು ಮಾನವೇ ಇಲ್ಲ; ಏಕೆಂದರೆ ಕರ್ತವ್ಯ ಕರ್ಮವೇ ದೇವರಲ್ಲವೆ .

# “ ವೈದ್ಯರೂ ವನಸ್ಪತಿಯು ”

–ರಾಜವೈದ್ಯ ಯ-ರಾ-ಪಂಡಿತವಾಸು, ರಾಜಾಜಿನಗರ, ಬೆಂಗಳೂರು-560010.

ವನಸ್ಪತಿಯ ಅಭಿಮಾನವಿಲ್ಲದ ವೈದ್ಯರು ಅಪರೂಪ, ಆದರೆ ಅವರ ಅಭಿಮಾನಕ್ಕೆ
ಕೇವಲ ವನಸ್ಪತಿಯಲ್ಲಿರುವ ಗುಣಗಳೇ ಕಾರಣವೆಂದು ಹೇಳಲು ಸಾಧ್ಯವಿಲ್ಲ. ವ
ಸ್ಪತಿಯ ಪುರಾತನವನ್ನು ದೊಡ್ಡದೊಂದು ಗುಣವೆಂದು ಅಭಿಮಾನ ಪಡುವವ
ಸಂಖೆ ಕಡಿಮೆಯಾಗಿಲ್ಲ. ಹಿಂದಿನದೆಲ್ಲವೂ ಚಿನ್ನ ಎಂಬುದೇ ಅವರ ಅಭಿಮಾನ
ಆಧಾರವಾಗಿರುವುದು ಕಾಲವು ಉರುಳಿದಂತೆ ಮನುಷ್ಯನ ಬುದ್ಧಿಯು ದುರ್ಬಲವಾ
ಗುತ್ತದೆಯೆಂದೂ ಆಯುಷ್ಯವು ಬುದ್ಧಿಯು ಸಂಕುಚಿತವಾಗುತ್ತದೆಯೆಂದೂ ಸದ್ಗುಣ
ಅದೃಶ್ಯವಾಗುತ್ತವೆಯೆಂದು ಅವರು ಅಚಲವಾದಸಿದ್ಧಾಂತವನ್ನು ಮಾಡಿಕೊಂಡಿದ್ದಾ

ಈ ಪುರಾತನ ಪ್ರಿಯರ ಅಭಿಮಾನವು ಸತ್ಯ ನಿಷ್ಠವೂ ಅನುಭವ ಜನ್ಯವೂ ಆ
ದ್ದರೆ ಯಾರೂ ಆಕ್ಷೇಪಿಸುವ ಕಾರಣವಿರಲಿಲ್ಲ ನಮ್ಮ ತಾತ-ಮುತ್ತಾತಂದಿರು ಅದ್ಭು
ಜ್ಞಾನಿಗಳಾಗಿದ್ದರೆಂಬ ವಿಷಯವು ನಮಗೂ ಹೆಮ್ಮೆಯ ಸಂಗತಿಯೇ ಹೌದು, ಆದ
ಅವರಜ್ಞಾನ ಶ್ರೇಷ್ಠತೆಗಳು ಅನುಭವದ ಒರೆಗಲ್ಲಿಗೆ ತಿಕ್ಕಲ್ಪಟ್ಟಾಗ ಅವುಗಳು ಪೊಳ್ಳೆಂದ
ಸಿದ್ಧವಾದರೆ ನಮ್ಮ ಹೆಮ್ಮೆಯು ಮಣ್ಣುಗೂಡುವುದರಲ್ಲಿ ಸಂದೇಹವಿಲ್ಲ, ಆದ್ದರಿ
ಬರಿ ಪುರಾತನತ್ವವೊಂದನ್ನೇ ಶ್ರೇಷ್ಠತೆಯ ಹೆಗ್ಗುರುತೆಂದು ಪರಿಗಣಿಸುವುದು ತಪ್ಪಾ
ಗುವುದು. ಶ್ರೇಷ್ಠವಾದ ಗುಣವು ಪ್ರತ್ಯಕ್ಷ ಕಾರ್ಯದಲ್ಲಿ ತನ್ನ ಪ್ರಕಾಶವನ್ನು ಕೆ
ಹದೆ ಬಿಡದು, ವನಸ್ಪತಿಯ ಹಿರಿಮೆಯು ರೋಗ ನಿರೋಧ ಮತ್ತು ನಿವಾರ
ಗಳಲ್ಲಿಯ ಯಶಸ್ಸಿನಿಂದ ಸಿದ್ಧವಾಗಬೇಕಲ್ಲದೆ ಬರೀಗ್ರಂಥಗಳ ಗಾತ್ರ ಭಾರದಿಂದಲ್ಲ
ಅರ್ಥಾತ್ ಸತ್ಯಪ್ರಿಯರಿಗೆ ವನಸ್ಪತಿಗಳು ಮುಖ್ಯವಲ್ಲ. ಅದರಿಂದ ಸಿದ್ಧಿಸಬಹುದಾ
ಲೋಕಕಲ್ಯಾಣವು ಮುಖ್ಯ.

ಮೇಲಿನ ವಿವೇಚನೆಗನುಸರಿಸಿ ಲೋಕ ಕಲ್ಯಾಣಕ್ಕೆ ಸಾಧಕವಾದುದೆಲ್ಲವೂ
ವನಸ್ಪತಿಯೇ ಎಂದು ಒಪ್ಪಿಕೊಳ್ಳುವವರೊಡನೆ ನನ್ನವಾದವಿಲ್ಲ, ಏಕೆಂದರೆ ಅದ
ಲೋಕ ಕಲ್ಯಾಣದ ಸಾಧನಗಳನ್ನು ಸಂಗ್ರಹಿಸುವಲ್ಲಿ ದೇಶ ಕಾಲ-ಜಾತಿ-ಭಾಷೆಗ
ನಿರ್ಬಂಧವನ್ನು ಹಾಕಿಕೊಳ್ಳುವದಿಲ್ಲ, ಪುರಾತನವಾಗಲಿ, ಆಧುನಿಕವಾಗಲಿ, ಪಾಶ್ಚಿ
ಮಾತ್ಯವಾಗಲಿ, ಪೌರಸ್ತ್ಯವಾಗಲಿ ಆತ್ಯಂತಿಕ ಹಿತಸಾಧಕವಾದುದೆಲ್ಲವೂ ಅವರಿ
ಪ್ರಿಯವೇ ಆಗಿದೆ, ಆದರೆ ವನಸ್ಪತಿಯು ಹಿತಕರವೇ, ಅಹಿತಕರವೇ ಎಂಬುದನ
ಪ್ರಶ್ನಿಸುವ ಅಧಿಕಾರವೇ ನಮಗಿಲ್ಲ, ಅಧಿಕಾರ ವಿದ್ದರೂ ಅದನ್ನು ಚರ್ಚಿಸುವ ಬುದ್ಧಿ
ನಮಗಿಲ್ಲ, ಬುದ್ಧಿಯಿದ್ದರೂ ಅದಕ್ಕೆ ಬೇಕಾದ ಧಾರ್ಮಿಕ ಪಾವಿತ್ರ್ಯವು ನಮ್ಮಲ್ಲಿ
ಎಂದು (ಅವರತ್ವ, ಆತ್ಮದೂಷಣೀಯ) ಸ್ವಭಾವದ ವೈದ್ಯರ ಪಂಗಡವೊಂದು ನಮ್ಮಲ್ಲಿ

ಅವರು ಹೊಸದೆಂದು ಅವರಿಗೆನಿಸಿದುದನ್ನೆಲ್ಲ ಹೀಯಾಳಿಸುವವರೇ ಹಳೆಯದೆಂದು ಅವರಿಗೆನಿಸಿದುದನ್ನೆಲ್ಲ ಹೊಗಳುವವರೇ, ಅವರ ಐತಿಹಾಸಿಕ ಅಜ್ಞಾನದಿಂದ ಎಷ್ಟೋ ಸಲ ಅವರು ಹಳೆಯದೆಂದು ತಿಳಿದಿರುವುದು ಹೊಸತಾಗಿರಬಹುದು, ಹೊಸತೆಂದು ತಿಳಿದಿರುವುದು ಹಳೆಯದಾಗಿರಬಹುದು, ಆದರೂ ಅವರ ವನಸ್ಪತಿಯ ಮೇಲಿರುವ ಪ್ರೀತಿಯು ಎಳ್ಳಷ್ಟೂ ತಗ್ಗದು, ವನಸ್ಪತಿಯ ಹೆಗ್ಗಳಿಕೆಯನ್ನು ಹಾಡುವವರಲ್ಲಿ ಕೆಲವರು ಈ ಕುರುಡುನಂಬಿಕೆಯ ವರ್ಗಕ್ಕೆ ಸೇರಿದ್ದಾರೆ.

ಈ ಕುರುಡು ನಂಬಿಕೆಯ ವನಸ್ಪತಿಗೆ ಅಪಮಾನಕರವಾಗಿದೆ, ಸಂದರ್ಭಕ್ಕೆ ಒದಗದ ಶ್ರೇಷ್ಠತೆಯು ಡಂಭಾಚಾರವಲ್ಲದೆ ಮತ್ತೇನು? ದುಷ್ಟವಿದ್ರಧಿಯು ಮಿತಿ ಮೀರಿ ಬೆಳೆದು ಮೇಲುಸಿರು ಬಿಡುತ್ತಿರುವ ರೋಗಿಯ ಇದಿರಿನಲ್ಲಿ ವನಸ್ಪತಿಯ ವರ್ಣನೆಗಳನ್ನು ಮಾಡುತ್ತಿದ್ದರೆ ಗುಣವಾಗದಷ್ಟೆ? ಆಗಬೇಕಾಗಿರುವುದೇನು? ಸದ್ಯಃ ಕಾರ್ಯತತ್ಪರತೆ, ಕುಶಲಮತಿ ಮತ್ತು ಚಿಕಿತ್ಸಾ ಕೌಶಲ್ಯವಲ್ಲವೇ? ಅದಿಲ್ಲದ ವನಸ್ಪತಿ ವೈದ್ಯರ ವರ್ಣನೆಯನ್ನು ಮೆಚ್ಚುವರಾರು? ಆದುದರಿಂದ ವನಸ್ಪತಿಯ ಶ್ರೇಯಸ್ಸನ್ನು ಬಯಸುವವರು ಬರಿ ಪರಂಪರೆಯನ್ನು ಹೊಗಳುವ ಭಟ್ಟಂಗಿಗಳಾಗದೆ ರೋಗಿಗಳಿಗೆ ಆತ್ಯಂತಿಕ ಹಿತವನ್ನು ಉಂಟುಮಾಡುವುದರಲ್ಲಿ ಗೆಲುವನ್ನು ಪಡೆಯಬೇಕು.

ಆನುವಂಶಿಕವನ್ನೂ, ವನಸ್ಪತಿಯನ್ನು ಬಾಯ್ತುಂಬ ಹೊಗಳುವ ಸನಾತನಿಗಳಲ್ಲಿ ನೂರಕ್ಕೆ ತೊಂಬತ್ತು ಮಂದಿ ಪಾಶ್ಚಾತ್ಯ ವೈದ್ಯರ ಕಡೆಗೇ ಚಿಕಿತ್ಸೆಗಾಗಿ ಓಡಾಡುತ್ತಾರೆಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ, ಅಥವಾ ಪಾಶ್ಚಾತ್ಯ ವೈದ್ಯರ ಅನುಕರಣ ಮಾಡುವ ವನಸ್ಪತಿ ವೈದ್ಯರಾದರೂ ಅವರಿಗೆಬೇಕು, ಅಂತಹ ಅನುಕರಣ ಶೀಲ ವೈದ್ಯರೂ ಅಸಂಬದ್ಧ ಸ್ವಭಾವದ ಸನಾತಸಿಗಳೂ ವನಸ್ಪತಿಯಲ್ಲಿ ಇಂಜೆಕ್ಷನ್, ಆ್ಯಸ್ಪಿರಿನ್ ಮುಂತಾದ ಸಕೃತ್ ಗುಣಕಾರಿಯಾದ ದ್ರವ್ಯ, ಉಪಾಯಗಳಿಲ್ಲವೆಂದು ನೆಪತೋರಿಸುತ್ತಾರೆ. ಹಾಗಾದರೆ ವನಸ್ಪತಿಯು ಹಿಂದಿನದು, ಸರ್ವಶ್ರೇಷ್ಠವೆಂದು ಹೊಗಳುವಾಗ ಅವರು ಈ ಸಕೃತ್ ಗುಣಕಾರಿಗಳನ್ನು ಮರೆತಿದ್ದರೇ? ಇಲ್ಲ. ಅವರ ಕುರುಡು ನಂಬಿಕೆಯ ಬರುಡು ಮಾತುಗಳೇ ಅವು, ಈ ಆತ್ಮವಂಚನೆಯೂ ವನಸ್ಪತಿಯ ವೈರಿಗಳಿಗೆ ಉತ್ತೇಜಕವಾಗಿದೆ. ಮಾತಿನಿಂದ ವನಸ್ಪತಿಯನ್ನು ಹೊಗಳುತ್ತ ಕೃತಿಯಿಂದ ಅದನ್ನು ತೆಗಳುತ್ತ ಒಂದು ವಿಧದ ಹಾಸ್ಯಾಸ್ಪದ ಪರಿಸ್ಥಿತಿಯನ್ನು ಹುಟ್ಟಿಸಿದ್ದಾರೆ.

ವನಸ್ಪತಿಯು ಸರ್ವರಮನ್ನಣೆಗೆ ಪಾತ್ರವಾಗಬೇಕಾದರೆ ಈ ತೊಡಕಿನ ಪರಿಸ್ಥಿತಿ ಹೋಗಬೇಕು. ವನಸ್ಪತಿಯ ವ್ಯಾಖ್ಯೆಯನ್ನು ವಿಶಾಲವಾಗಿ ಮಾಡಿ ರೋಗಿಗೆ ಆತ್ಯಂತಿಕ ಹಿತಕರವಾದುದೆಲ್ಲವೂ ಅದರಲ್ಲಿ ಒಳಪಡುವಂತೆ ಏರ್ಪಡಿಸಬೇಕು. ಇಲ್ಲವೆ ವನಸ್ಪತಿಗಳಲ್ಲಿ ಅನೇಕ ಕೊರತೆಗಳು ಇವೆ ಎಂಬುದನ್ನು ಘಂಟಾ ಘೋಷವಾಗಿ ಸಾರಿ ಆ ಕೊರತೆ

ಗಳನ್ನು ಪೂರೈಸುವ ಜ್ಞಾನಾನುಭವಗಳನ್ನು ಎಲ್ಲ ದೇಶ ದಿಕ್ಕುಗಳಿಂದಲೂ ಸ್ವಾಗತಿಸಿ ಸಂಗ್ರಹಿಸಬೇಕು. ಅರ್ಥಾರ್ತಾಸುಸಂಗತವಾದ ವ್ಯಾಖ್ಯೆಯಿಂದ ವನಸ್ಪತಿಯಲ್ಲಿನ ಪರಿಪೂರ್ಣತೆಯನ್ನು ಕಂಡುಕೊಳ್ಳುವುದು ಒಂದು ದಾರಿ, ಅಥವಾ ಅಪೂರ್ಣವಾಗಿರುವ ವನ. ಸ್ಪತಿಯನ್ನು ದುರಭಿಮಾನ ರಹಿತವಾಗಿ ಪೂರ್ಣತೆಗೊಯ್ಯುವುದು ಮತ್ತೊಂದುದಾರಿ

ಲೊಕಹಿತವನ್ನೇ ಗುರಿಯಾಗಿಟ್ಟುಕೊಂಡು ವೈದ್ಯರನೇಕರು ವನಸ್ಪತಿ, ಗಿಡ ಮೂಲಿಕೆಗಳಲ್ಲಿಯ ಷಡ್ರಸ-ತ್ರಿದೋಷ ಮುಂತಾದ ಕೆಲವು ಸಿದ್ಧಾಂತಗಳನ್ನು ಅಚಲವೆಂದು ಭಾವಿಸಿದ್ದಾರೆ, ಮತ್ತು ವನಸ್ಪತಿಯು ಈ ಸಿದ್ಧಾಂತಗಳ ಬಲದಿಂದಲೇ ತ್ರಿಕಾಲ ಬಾಧಿತವಾಗಿದೆಯೆಂದು ನಂಬಿದ್ದಾರೆ. ಅವರ ಆ ಭಾವನೆ ನಂಬಿಕೆಗಳಿಗೆ ಸ್ವಂತದ ಪ್ರಯೋಗಾನುಭವಗಳು ಆಧಾರವಾಗಿಲ್ಲ. ಆಗಮ ಅನುಮಾನಗಳೇ ಅವರ ನಂಬಿಕೆಗೆ ಆಧಾರ ಆದರೆ ನಾವೀಗ ವಿಜ್ಞಾನಯುಗದಲ್ಲಿ ಬಾಳುತ್ತಿದ್ದೇವೆ ಮತ್ತು ಪ್ರಯೋಗಾನುಭವಗಳೇ ವಿಜ್ಞಾನದ ತಳಗಲ್ಲು ಎಂಬುದನ್ನು ಎಲ್ಲರೂ ಬಲ್ಲರು ಆದ್ದರಿಂದ ಪ್ರಯೋಗಾನುಭವಗಳಿಂದ ಸಿದ್ಧವಾಗುವವರೆಗೆ ವನಸ್ಪತಿ ಗಿಡ ಮೂಲಿಕೆಗಳಿಗೆ ವಿಜ್ಞಾನದ ಪಟ್ಟವನ್ನು ಕಟ್ಟಲು ಆಧುನಿಕರು ಒಪ್ಪಲಾರರು.

ಆಧುನಿಕ ವಿಜ್ಞಾನದ ಪ್ರಯೋಗ ಪರೀಕ್ಷಣಗಳ ರೀತಿಯು ವನಸ್ಪತಿಯ ರೀತಿಗಿಂತ ಭಿನ್ನವಾಗಿರಬಹುದು, ಆದರೆ ಆ ಭಿನ್ನರೀತಿಯನ್ನೇ ವಿಜ್ಞಾನಿಗಳ ತರ್ಕಕ್ಕೆ ಒಪ್ಪುವಂತೆ ಮಾಡುವುದು ವೈದ್ಯರಮೇಲಿರುವ ಅನಿವಾರ್ಯವಾದ ಹೊಣೆಯಾಗಿದೆ, ಅದಕ್ಕಾಗಿ ಆಧುನಿಕ ವಿಜ್ಞಾನದ ಪರಿಭಾಷೆ ಮತ್ತು ವನಸ್ಪತಿ ಗಿಡಮೂಲಿಕೆಗಳ ವಿಜ್ಞಾನದ ಪರಿಭಾಷೆಗಳಲ್ಲಿ ಅಭಿನ್ನತೆಯನ್ನುಂಟು ಮಾಡಲು ಸಮೀಕರಿಸಲು ಹೆಣಗುವುದು ಒಂದು ದಾರಿ, ಅಥವಾ ವನಸ್ಪತಿ ವಿಜ್ಞಾನ ಸ್ವತಂತ್ರವಾದ ತರ್ಕಬದ್ಧವಾದ ಅಸ್ತಿತ್ವವು ಹೇಗೆ ಪಡೆದಿದೆ ಎಂಬುದನ್ನು ವಿವೇಕಕ್ಕೆ ಒಪ್ಪುವಂತೆ ತೋರಿಸುವುದು, ವಿಶ್ಲೇಷಣ ಪ್ರಯೋಗಗಳನ್ನು ಕೈಕೊಳ್ಳುವುದು ಮತ್ತೊಂದು ದಾರಿ, ಯಾವ ದಾರಿಯನ್ನೇ ಹಿಡಿದರೂ ಪ್ರಾಮಾಣಿಕರಾದ ವಿಜ್ಞಾನಿಗಳಿಗೆ ಮನವರಿಕೆ ಯಾಗದಹೊರತು ವನಸ್ಪತಿಗೆ ಆಧುನಿಕ ಯುಗದಲ್ಲಿ ಪ್ರಮುಖ ಸ್ಥಾನವು ಸಿಕ್ಕಲಾರದು.

ಆನುವಂಶಿಕ ಪ್ರಿಯತೆಯು ಕೆಡುಕಲ್ಲ, ಆದರೆ ಆನುವಂಶಿಕದಲ್ಲಿಯ ಸತ್ಯತ್ವವನ್ನು ಸಿದ್ಧಪಡಿಸಲಾಗದಿರುವುದು ಆನುವಂಶಿಕೆಗೂ ಘಾತಕ, ಅದರ ಭಕ್ತರಿಗೂ ಘಾತಕ ಆದ್ದರಿಂದ ವನಸ್ಪತಿ ಗಿಡಮೂಲಿಕೆಗಳ ಪರಂಪರೆಯು ಅಚ್ಚಳಿಯದೆ ಉಳಿದು ಬೇಕೆನ್ನುವ ವೈದ್ಯರು ವನಸ್ಪತಿಯ ವಿಜ್ಞಾನವನ್ನು ಜನರಿಗೂ ವಿಜ್ಞಾನಿಗಳಿಗೂ ಮನಗಾಣಿಸಲಿ ಹಳೆಯ ಗ್ರಂಥ ಭಕ್ತಿಗಿಂತ ತಿಳಿವಿನ ಯುಕ್ತಿಗೆ ಮನ್ನಣೆಕೊಟ್ಟು ಮಾತು ಕೃತಿಗಳೆಲ್ಲವೂ ವಿಜ್ಞಾನ ಸಮ್ಮತವಾಗುವಂತೆ ವರ್ತಿಸಲಿ.

# ಮೂಢನಂಬಿಕೆ ಮತ್ತು ವೈಜ್ಞಾನಿಕ ಮನೋಭಾವ

ಆರ್. ವಿ. ಭಂಡಾರಿ, ಅಂಚೆ ಅರೆಅಂಗಡಿ, ತಾಲ್ಲೂಕು ಹೊನ್ನವಾರ, ಜಿಲ್ಲೆ-ಉ.ಕ. 581430.

ಮೂಢನಂಬಿಕೆ ಎಂದರೇನು? ಮೂಢನಂಬಿಕೆ ಎಂದರೆ ಜನರ ಅವೈಜ್ಞಾನಿಕವಾದ ನಂಬಿಕೆ, ಪ್ರಶ್ನೆ ಕೇಳದೆ, ಪ್ರಯೋಗ ಬಯಸದೇ, ಪ್ರಾತ್ಯಕ್ಷಿಕತೆಯಿಲ್ಲದೆ ಎಲ್ಲವನ್ನು ದೈವಿಕ, ಮಹಿಮಾಪೂರ್ಣ ಎಂದು ನಂಬುವುದು. ಸಾಧು ಸನ್ಯಾಸಿಗಳ ವೇಷದಲ್ಲಿರುವ ಪುರೋಹಿತ, ಪೂಜಾರಿ, ದೇವಸ್ಥಾನ, ದೆವ್ವ ಸ್ಥಾನದಲ್ಲಿರುವ ಕಪಟಗಳು ಮನುಷ್ಯ ಶಕ್ತಿಗೆ ಮೀರಿದ್ದೆಂದು ತೋರಬಹುದಾದ ಕೆಲಸವನ್ನು ಮಂತ್ರ ತಂತ್ರಗಳ ಸೋಗಿನಲ್ಲಿ ಪವಾಡಗಳ ಹೆಸರಿನಲ್ಲಿ ಮಾಡಿ ತೋರುವ ಕೆಲಸವನ್ನು ಪ್ರಶ್ನಿಸದೆ, ಸಂಶಯಿಸದೆ ಮುಗ್ಧ ಮೌಢ್ಯದಿಂದ ನಂಬುವುದೇ ಆಗಿದೆ. ಹಂಪೆಯಲ್ಲಿ ಕೈ ತಿರುಗಿಸಿ ವಿಭೂತಿ ತರಿಸುವುದು, ನೀರನ್ನು ಪೆಟ್ರೋಲನ್ನು ಮಾಡುವುದು, ಮಂತ್ರದಿಂದ ಬೆಂಕಿ ಉರಿಸುವುದು ಕೆಂಡ ಹಾಯುವುದು ಜ್ಯೋತಿಷ್ಯ, ಹಸ್ತ ಸಾಮುದ್ರಿಕೆ ಹೇಳುವುದು, ಮೋಡಿ ಮಾಡುವುದು, ಉರುಳು ಸೇವೆ, ಸಿಡಿ, ಸತ್ತವರೊಡನೆ ಮಾತಾಡುವುದು, ದೆವ್ವ ಬಿಡಿಸುವುದು ಇಂಥ ಕೈಚಳಕವೆಲ್ಲ ಈ ಸಾಲಿಗೆ ಸೇರುತ್ತವೆ. ಮೂಢನಂಬಿಕೆಯ ಮೂಲ ಅಜ್ಞಾನ ಮತ್ತು ಭಯ. ಈ ಭಯವೂ ಅಜ್ಞಾನವೂ ಮನುಷ್ಯನ ವಿಚಾರ ಶಕ್ತಿಯನ್ನು ನಾಶ ಮಾಡುತ್ತದೆ. ಬೆಳವಣಿಗೆಯನ್ನು ನಾಶಮಾಡುತ್ತದೆ. ಆ ಮುಖಾಂತರ ವೈಯಕ್ತಿಕವಾದ ಮತ್ತು ರಾಷ್ಟ್ರದ್ದಾದ ಪ್ರಗತಿ ಕುಂಠಿತವಾಗುತ್ತದೆ. ಅಂಥ ಜನ, ರಾಷ್ಟ್ರದ ದಾಸ್ಯಕ್ಕೆ ಪಕ್ಕಾಗುತ್ತವೆ. ಹಾಗಾದರೆ ಈ ಮೌಢ್ಯವನ್ನು ನಿವಾರಿಸಲು ಏನು ಮಾಡಬೇಕು? ಅದಕ್ಕೆ ಒಂದು ಮುಖ್ಯ ಉಪಾಯವೆಂದರೆ ವೈಜ್ಞಾನಿಕ ಮನೋಭಾವವನ್ನು ಜನಸಾಮಾನ್ಯರಲ್ಲಿ ಬೆಳೆಸುವುದು.

ವೈಜ್ಞಾನಿಕ ಮನೋಭಾವ ಎಂದರೇನು? ವೈಜ್ಞಾನಿಕ ಮನೋಭಾವ ಎಂದರೆ ಪ್ರಯೋಗದ ಮೂಲಕ, ಪ್ರಾತ್ಯಕ್ಷಿಕೆಯ ಮೂಲಕ, ತರ್ಕದ ಮೂಲಕ ಪ್ರಶ್ನಿಸುವ ಮೂಲಕ ಸತ್ಯವನ್ನು ಕಂಡುಹಿಡಿಯುವುದು ಮತ್ತು ಸದಾ ಅನ್ವೇಷಣಾಶೀಲರಾಗಿರುವುದು. ಬೇರೆಯವರ ಅಭಿಪ್ರಾಯವನ್ನು ದೈಹಿಕವಾಗಿ ನಾಶ ಮಾಡಲು ಬಯಸುವ ಗೂಂಡಾಗಿರಿಗೆ ಇಳಿಯದೆ ಪ್ರಯೋಗ, ಪರೀಕ್ಷೆಗಳಿಗೆ ಒಳಪಡಿಸಿ ನಿರ್ಣಯಕ್ಕೆ ಬರುವ ವಿನಯವಂತಿಕೆಯೂ ವೈಜ್ಞಾನಿಕ ಮನೋಭಾವದ ಅಂಗವೇ ಆಗಿದೆ.

ನಮ್ಮ ದೇಶ ಮೂಢನಂಬಿಕೆ, ಅಂಧಶ್ರದ್ಧೆ, ಅವೈಜ್ಞಾನಿಕತೆಯಿಂದ ತುಂಬಿ ತುಳುಕುತ್ತಿದೆ. ಇದಕ್ಕೆ ಅನೇಕ ಕಾರಣಗಳು ಇರಬಹುದು. ಮುಖ್ಯವಾಗಿ ಬಡತನ, ಅನಕ್ಷರತೆ ಜಾತಿಭೇದವೇ ಮೊದಲಾದ ಅಸ್ಪೃಶ್ಯತೆ, ಕೆಲಸದ ಬಗೆಗೆ ಇರುವ ಕೀಳರಿಮೆಯ ಮನೋಭಾವ ಇದಕ್ಕೆ ಧರ್ಮದರ್ಶನದ ಕಾಣಿಕೆಯೂ ಕಡಿಮೆಯೇನಲ್ಲ.

'ಜಾತಿ ಭೇದಗಳಿಂದ ಪೀಡಿತವಾದ ಹಾಗೂ ವೇದಗಳ, ಪುರಾಣಗಳ ಮತ್ತು ಸ್ಮೃತಿಗಳ ಅಧಿಕಾರಗಳಿಂದಲೂ, ವಿಧಿನಿಷೇಧಗಳಿಂದಲೂ ಜಡಭರಿತವಾದ ಹಾಗೂ ಈ ಕಾರಣದಿಂದ ವಿಚಾರ ಶಕ್ತಿಯು ಕುಂಠಿತವಾಗಿಯೂ ಪಾರ್ಶ್ವವಾಯು ಬಡಿದಂತಾಗಿಯೂ ಇರುವ ಒಂದು ಜನಾಂಗದೊಳಗೆ ಬೋಯಲ್‌ನಂಥವನೊಬ್ಬ (ವಿಜ್ಞಾನಿ) ಹುಟ್ಟಿ ಸಮರ್ಪಕವಾದ ಮಾರ್ಗದರ್ಶಕ ತತ್ವಗಳನ್ನು ಪ್ರತಿಪಾದನೆಮಾಡಲು ಸಾಧ್ಯವಿರಲಿಲ್ಲ ಎಂದು ವಿಜ್ಞಾನಿ ಸಿ.ಪಿ.ರೇ. ಹೇಳುವುದು. ನಮ್ಮ ಮನಸ್ಸನ್ನು ಸೆಳೆಯುತ್ತದೆ. ಈ ಕಾರಣವೂಎನ್ನುವಂತೆ ನಮ್ಮಲ್ಲಿ ಪ್ರಯೋಗಶೀಲತೆಯು ಕುಂಟುತ್ತಲೇ ಬಂತು. ಸ್ವಾತಂತ್ರ್ಯದ ತುಸು ಮೊದಲಿನಿಂದ ಹಿಡಿದು ಸ್ವಾತಂತ್ರ್ಯ ನಂತರ ನಮ್ಮಲ್ಲಿ ವಿಜ್ಞಾನವೂ ತಂತ್ರಜ್ಞಾನವೂ ಬೆಳೆದಿದೆ. ಬೆಳೆಯುತ್ತಲೇ ಇದೆ. ಆದರೆ ಇದು ನಮ್ಮ ವೈಚಾರಿಕತೆಯಲ್ಲಿ, ನಮ್ಮ ನಡತೆಯಲ್ಲ ಪ್ರತ್ಯಕ್ಷವಾಗಿಲ್ಲ. ನಮ್ಮ ರಕ್ತದಲ್ಲಿ ಒಂದಾಗಿ ಹೋಗಲಿಲ್ಲ. ಅದಕ್ಕೆ ಕಾರಣ, ನಾನು ಊಹಿಸಿದಂತೆ, ವಿಜ್ಞಾನ ನಮ್ಮ ನೆಲದಲ್ಲಿ ಬೆಳೆಯಲಿಲ್ಲ. ಆದರ ತಳಮಳವನ್ನು ನಾವು ಅನುಭೋಗಿಸಲಿಲ್ಲ. ಅದರ. ಅಗ್ನಿದಿವ್ಯಕ್ಕೆ ಮುಖಾಮುಖಿಯಾಗಲಿಲ್ಲ. ಯಾಕೆಂದರೆ ನಾವು ಅದನ್ನು ಅಮದು ಮಾಡಿಕೊಂಡಿದ್ದು ಪಠ್ಯಪುಸ್ತಕಗಳಲ್ಲಿ ಪರೀಕ್ಷೆಗಾಗಿ. ವಿಜ್ಞಾನವಾದರೆ ವ್ಯವಹಾರದಲ್ಲಿ ಸೌಲಭ್ಯಕ್ಕಾಗಿ ತಂತ್ರಜ್ಞಾನ. ಆದರೆ ನಡೆತೆಯಲ್ಲಿ ಅದೇ ನಂಬಿಕೆ, ಅದೇ ಮೌಢ್ಯ, ನಮ್ಮ ಪ್ರಾಥಮಿಕ-ಮಾಧ್ಯಮಿಕ ಶಾಲೆಗಳಲ್ಲಿ ಪ್ರತ್ಯಕ್ಷ ಪ್ರಯೋಗ ಮತ್ತು ನಿರೀಕ್ಷಣೆಗಿಂತ 'ಪಟ್ಟಪ್ರಯೋಗ' ವೇ ಜಾಸ್ತಿ. ಆದ್ದರಿಂದ ವಿದ್ಯಾವಂತರ ನಡವಳಿಕೆಯೂ ಸಹ ಹೇಗಾಗಿದೆಯೆಂದರೆ ಅಧ್ಯಾಪಕರನ್ನು ತರಗತಿಯಲ್ಲಿ ಡಾರ್ವಿನ್ನನ ಸಿದ್ಧಾಂತವನ್ನು ವೈಜ್ಞಾನಿಕವಾಗಿ ಪಾಠ ಹೇಳುತ್ತಾನೆ. ಆದರೆ ಅದೇ ವ್ಯಕ್ತಿ ಚರ್ಚಿನಲ್ಲಿ ಅಥವಾ ದೇಸ್ಥಾನದಲ್ಲಿ ಯಾವುದೇ ಸಂಕೋಚವಿಲ್ಲದೇ ವಿಜ್ಞಾನಕ್ಕೆ ಅಸಂಗತವಾದ ವಿಕಾಸವಾದವನ್ನು ನಂಬಿಕೆಯ ಮೂಲಕ ಬೋಧಿಸುತ್ತಾನೆ. ಮನುಷ್ಯ ಯಶಸ್ವಿಯಾಗಿ ಚಂದ್ರನನ್ನು ತಲ್ಪಿಬಂದಿದ್ದಾನೆ. ಆದರೂ ಗ್ರಹಣದ ಬಗ್ಗೆ ಎರಡು ಸಿದ್ಧಾಂತಗಳಿವೆ. ಒಂದು ತರಗತಿಯಲ್ಲಿ ಬೋಧನೆಗೆ ಮತ್ತೊಂದು ಮನೆಯಲ್ಲಿ ಆಚರಣೆಗೆ, ಭೌತಶಾಸ್ತ್ರವನ್ನು ಪಾಠ ಹೇಳುತ್ತಾ ಹಸ್ತಸಾಮುದ್ರಕವನ್ನು ನಂಬುವವರುಂಟು. ಹಾಗೆಯೇ ಹಲವಾರು ವಿಜ್ಞಾನಿಗಳು ಜ್ಯೋತಿಷ್ಯವನ್ನು ನಂಬುವವರೂ ಅಪರೂಪವೇನಲ್ಲ. ಒಬ್ಬ ವಿಜ್ಞಾನಿಯು ವಸ್ತುಸ್ಥಿರತೆಯ ನಿಯಮವು ಅಥವಾ ಇನ್ನು ಸ್ಪಷ್ಟವಾಗಿ ಹೇಳಬೇಕಾದರೆ ವಸ್ತು ಮತ್ತು ಚೈತನ್ಯಗಳ ಸ್ಥಿರತೆಯ ನಿಯಮವು ಪುಟ್ಟಪರ್ತಿ ಹಾಗೂ ವೈಟ್ ಫೀಲ್ಡ್‌ಗಳಿಗೆ ಅನ್ವಯಿಸುವುದಿಲ್ಲವೆಂದು ಹೇಳಿದರೆ ಅದು ಶತ ಮೂರ್ಖತನವಲ್ಲವೇ? ನೀರು, ಪೆಟ್ರೋಲ್ ಪರಿವರ್ತನೆ ಹೊಂದುವುದು. ಕ್ಯಾನ್ಸರ್, ಡಾಯಬಿಟೀಸ್‌ದಂತಹ ರೋಗಗಳು ಬೂದಿ ಹಚ್ಚುವುದರಿಂದ ವಾಸಿಯಾಗುತ್ತದೆಂದು ಹೇಳುವುದರಲ್ಲಿ ಏನಾದರೂ ಅರ್ಥವಿದೆಯೇ? ಈ ರೀತಿ ಪವಾಡಗಳ ಬಗೆಗೆ ಗಾಢವಾದ ನಂಬಿಕೆಗಳನ್ನು ವ್ಯಕ್ತಪಡಿಸುವುದು ಶೋಚನೀಯ ಎಂದು

ಡಾ. ಎಚ್. ನರಸಿಂಹಯ್ಯನವರು ಹೇಳುತ್ತಾರೆ. (ತೆರೆದಮನ 1992; 160) ವಿದ್ಯಾವಂತರ ಸ್ಥಿತಿಯೇ ಹೀಗಾದ ಮೇಲೆ ಹೆಬ್ಬೊಟ್ಟನವರ ಸ್ಥಿತಿ ಗತಿಯೇನು?

ಈ ಸ್ಥಿತಿಯಿಂದ ನಮ್ಮ ಜನಸಮೂಹ ಪಾರಾಗಬೇಕು. ಅವರ ಮಿದುಳಿಗೆ ಹತ್ತಿದ ಬಿಂಜಿಲುಗಳನ್ನು ಗುಡಿಸಿಹಾಕಬೇಕು. ಕಣ್ಣಿಗೆ ಕಟ್ಟಿದ ಕತ್ತಲು ನಿವಾರಣೆಯಾಗಬೇಕು. ಮನಸ್ಸಿನ ಅಳುಕನ್ನು ನಿವಾರಿಸಬೇಕು. ಇದು ಏನೆನ್ನುವ, ಇದು ಯಾಕೆನ್ನುವ, ಇದು ಹೇಗೆನ್ನುವ ಕುತೂಹಲ ಉಂಟಾಗಬೇಕು. ನೋಡಿ ತಿಳಿಯುವ ಮಾಡಿ ತಿಳಿಯುವ, ಪ್ರಶ್ನಿಸಿ ಸೌಲಭ್ಯವನ್ನು ಪಡೆಯುವ, ಹೋರಾಟಕ್ಕಿಳಿಯುವ ಸ್ಥೈರ್ಯ ಜನದ್ದಾಗಬೇಕು. ಅದೇ ನಮ್ಮ ಪ್ರಗತಿಗೆ ತಾರಕ. ನಮ್ಮ ಮಟ್ಟಿಗೆ ಹೇಳುವುದಾದರೆ ನಾವು ವಿಜ್ಞಾನವನ್ನು ಹಲವಾರು ತಾಂತ್ರಿಕ ಕ್ಷೇತ್ರಗಳಲ್ಲಿ ಬೆಳಸಿಕೊಳ್ಳುವುದಷ್ಟೇ ಅಲ್ಲದೇ ಜೀವನದ ಎಲ್ಲ ಸಮಸ್ಯೆಗಳನ್ನು ವೈಜ್ಞಾನಿಕ ಮನೋ-ಭಾವದ ದೃಷ್ಟಿಯಿಂದ ನೋಡಲು ಬದ್ಧರಾಗಿದ್ದೇವೆ. ನಾವು ಕ್ರಮೇಣವಾಗಿ ನಮ್ಮ ಕಾರ್ಯ ಚಟುವಟಿಕೆಗಳಲ್ಲಿ ವೈಜ್ಞಾನಿಕ ಮನೋಭಾವವನ್ನು ಬೆಳೆಸಿಕೊಳ್ಳದೆ ಹೋದಲ್ಲಿ ನಾವು ಮಾಡುವ ಯಾವುದೇ ಸಾಧನೆ ಪರಿಪೂರ್ಣವಾಗದೇ ಹೋಗ-ಬಹುದು. ವಿಜ್ಞಾನದ ತರಬೇತಿಯೆಂದರೆ ಒಂದು ವೃತ್ತಿಯನ್ನು ಅವಲಂಬಿಸಲು ನೀಡುವ ತರಬೇತಿಯಲ್ಲಿ ಬದಲಿಗೆ ಅದು ಒಂದು ನಿಶ್ಚಿತ ವಿಧಾನದಲ್ಲಿ ಚಿಂತಿಸಲು ನೀಡುವ ತರಬೇತಿಯಾಗಿರುತ್ತದೆ. (ತೆರೆದ ಮನ) ಭಾರತದ ವಿಜ್ಞಾನ ಪರಿಷತ್ತಿನವರು ದಕ್ಷಿಣ ಕನ್ನಡ ಜಿಲ್ಲೆಯ ವಿಚಾರವಾದಿ ವೇದಿಕೆಯ ನರೇಂದ್ರ ನಾಯಕ ಮತ್ತಿತರ ಸದಸ್ಯರು ಇನ್ನು ಅನೇಕರು ಬೇರೆ ಬೇರೆ ಜಿಲ್ಲೆಯಲ್ಲಿಯ ಧೀಮಂತರು ಸಾವಿರಾರು "ಪವಾಡಬಯಲು" ಕಾರ್ಯಕ್ರಮ ಮಾಡಿತೋರಿಸಿದ್ದಾರೆ. ಪವಾಡದ ಹಿಂದಿರುವ ಕಣ್ಕಟ್ಟು, ಕೈಚಳಕ, ವೈಜ್ಞಾನಿಕ ನಿಯಮಗಳನ್ನು ತಿಳಿಸಿ ಹೇಳಿ ಪವಾಡದ ಹೆಸರಿನಲ್ಲಿ ನಡೆಯುವ ಬೂಟಾಟಿಕೆಯನ್ನು ಬಯಲು ಮಾಡುತ್ತಿದ್ದಾರೆ. ಮೂಢ ನಂಬಿಕೆಯನ್ನು ಹೋಗಲಾಡಿಸುವಲ್ಲಿ ಇದೂ ಕೂಡ ಪರಿಣಾಮಕಾರಿಯಾದ ಸಾಧನವೇ ಹೀಗೆ ಜನರ ಮಧ್ಯ ಇಂಥವುಗಳು ಮತ್ತೆ ಮತ್ತೆ ಆಗುತ್ತಿದ್ದರೆ, ಪತ್ರಿಕೆ-ಪುಸ್ತಕಗಳು ಇಂಥವುಗಳನ್ನು ಪ್ರಚಾರ ಮಾಡುತ್ತಿದ್ದರೆ ಕ್ರಮೇಣ ಜನ ಎಚ್ಚರಗೊಳ್ಳುತ್ತಾರೆ. ನಮ್ಮ ವೈಜ್ಞಾನಿಕ ಮನೋಭಾವವನ್ನು ಬೆಳೆಸಿಕೊಳ್ಳುತ್ತಾರೆ. ಅಷ್ಟರಮಟ್ಟಿಗೆ ಜನರ ಸುಲಿಗೆ ನಿಲ್ಲುತ್ತದೆ.

ಹೀಗೆ ವೈಜ್ಞಾನಿಕ ಮನೋಭಾವವನ್ನು ಬೆಳೆಸುವುದು ಪ್ರತಿಯೊಬ್ಬ ಸುಸಂಸ್ಕೃತ ಪ್ರಜೆಯ ಕರ್ತವ್ಯವಾಗಿದೆ. ವೈಜ್ಞಾನಿಕ ಮನೋಭಾವವನ್ನು ಬೆಳೆಸುವುದು ನಮ್ಮ ಸಂವಿಧಾನದ ನಿರ್ದೇಶಕ ತತ್ವಗಳಲ್ಲಿ ಒಂದಾಗಿದೆ.

ಸೌಜನ್ಯ :– ಚಿತ್ತರ, ಮಾಹಿತಿ ಕೇಂದ್ರ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಕಮಲಾಪುರ–583 221)

## ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ, ಕಮಲಾಪುರ-೫೮೩ ೨೨೧,
ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ.

ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗವು ಕಳೆದ ಒಂದೂವರೆ ವರ್ಷದಿಂದ ಪ್ರಕಟಿಸುತ್ತಿರವ 'ವಿಜ್ಞಾನ ಸಂಗಾತಿ' ಎಂಬ ಮಾಸಿಕ ನಿಯತಕಾಲಿಕೆಗೆ ಚಂದಾದಾರರನ್ನು ಮಾಡಿಸಿ ಕೊಡುವ ಆಸಕ್ತರಿಗೆ ಕಮಿಷನ್ ನೀಡಲಾಗುವುದು. ಈ ನಿಯತಕಾಲಿಕೆಗೆ ಮುಖ್ಯವಾಗಿ ವೈಜ್ಞಾನಿಕ ವಿಷಯಗಳನ್ನು ಶಾಲಾ ಕಾಲೇಜು ವಿದ್ಯಾರ್ಥಿಗಳಿಗೆ ಕನ್ನಡದಲ್ಲಿ ಅತ್ಯಂತ ಸರಳವಾಗಿ ತಿಳಿಯ ಪಡಿಸುವ ಕನ್ನಡದ ಏಕೈಕ ಪತ್ರಿಕೆಯಾಗಿದೆ. ಚಂದಾದಾರರನ್ನು ಮಾಡಿಸುವವರು ಚಂದಾದಾರರ ವಿಳಾಸ ಮತ್ತು ಸಂಗ್ರಹಿಸಿದ ಚಂದಾ ಹಣವನ್ನು "ನಿರ್ದೇಶಕರು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ವಿದ್ಯಾರಣ್ಯ ಕಮಲಾಪುರ ೫೮೩ ೨೨೧, ಇವರಿಗೆ ಎಂಓ ಅಥವಾ ಡಿ.ಡಿ. ಮೂಲಕ ಕಳುಹಿಸಿಕೊಡಬೇಕು. ಹೀಗೆ ಕಳುಹಿಸುವಾಗ ತಾವು ಮಾಡಿಸಿದ ಚಂದಾದಲ್ಲಿ ಮೊದಲೇ ಶೇ. ೩೫ ಕಮಿಷನ್ ಹಣವನ್ನು ಮುರಿದುಕೊಂಡು ಕಳುಹಿಸಬೇಕು. ಹೀಗೆಕಳುಹಿಸಿದಾಗ ಕನಿಷ್ಠ ಒಮ್ಮೆ ಐದು ಜನ ಚಂದಾದಾರರನ್ನು ಕಳುಹಿಸಬೇಕು. ಚಂದಾದಾರರ ವಿಳಾಸ ಮತ್ತು ಹಣ ತಲುಪಿದ ಮೇಲೆ ಅವರಿಗೆ 'ವಿಜ್ಞಾನ ಸಂಗಾತಿ' ಸಂಚಿಕೆಯನ್ನು ಕನ್ನಡ ವಿಶ್ವವಿದ್ಯಾಲಯದ ಪ್ರಸಾರಾಂಗ ಕಳುಹಿಸಿಕೊಡುವ ಏರ್ಪಾಡು ಮಾಡುವುದು. ವಿಜ್ಞಾನ ಸಂಗಾತಿಯ ವಾರ್ಷಿಕ ಚಂದಾ ರೂ. ೧೦೦-೦೦.

ನಿರ್ದೇಶಕರು : **ಡಾ. ಕರೀಗೌಡ, ಬೀಚನಹಳ್ಳಿ.**

## ವಚನಗಳು

ಅಂಗದ ಲಿಂಗವೆ ಮನದ ಲಿಂಗ, ಮನದ ಲಿಂಗವೆ ಭಾವದ ಲಿಂಗ, ಭಾವ ಲಿಂಗವೆ ಜಂಗಮದಾಸೋಹ. ದಾಸೋಹವೆಂಬುದು ಸಂದಿಲ್ಲದ ನಿಜನೋಡ! ಅದು ದವ ತಿಳಿದು ನಿಂದೆ ನಿಲುಕಡೆಯ ಭೇದವನೆ ಕೇಳಬೇಕೆಂದು ಬಂದಲ್ಲಿಯೆ ತಿಳುಹ ಕಯ್ಯಾ. ಇಂತೀ ಪ್ರಕಾರದಲ್ಲಿ ಸಂದ ಸೌಖ್ಯದ ಭೇದವನು, ಸಂದಿಲ್ಲದ ಲಿಂಗದ ನಿ ವನು, ಇಂದು ನಮ್ಮ ಗುಹೇಶ್ವರಲಿಂಗದಲ್ಲಿ ಚಂದಯ್ಯಂಗೆ ಕೊಡಾ ಚನ್ನಬಸವಣ್ಣ

# ನಾಗರಪಂಚಮಿ ನಾಡಿಗೆದೊಡ್ಡದು

-ಆರ್. ಜಿ. ಶಾನಭಾಗ, ಹೊನ್ನಾವರ ಶರಾವತಿ ಪ್ರೌಢಶಾಲೆ, ಹೊಸಾಡ, ಹೊನ್ನಾವರ
(ಉತ್ತರ ಕನ್ನಡ)

ಪ್ರಕೃತಿಯ ಶಕ್ತಿಗಳನ್ನು ಕಂಡು ಬೆರಗಾದ ಮಾನವನಲ್ಲಿ ದೇವತ್ವ ಕಲ್ಪನೆ ಮೂಡಿದಾಗ ಅವುಗಳನ್ನು ಸಂತೃಪ್ತಿಗೊಳಿಸಲೋಸ್ಕರ ಪೂಜಾ ಕೈಂಕರ್ಯಗಳನ್ನಾರಂಭಿಸಿದನು. ಈ ಪೂಜೆಗಳೇ ಕಾಲಾನುಕ್ರಮವಾಗಿ ಹಬ್ಬಗಳಾಗಿ ಪರಿವರ್ತನೆಗೊಂಡು ಸಾಂಪ್ರದಾಯಿಕವಾಗಿ ಆಚರಣೆಗೊಂಡವು. ಪಂಚ ಪಕ್ವಾನ್ನಗಳನ್ನು ತಿಂದುಂಡು ತೇಗಿಸಿ ನಕ್ಕು ನಲಿದು ಅಮೋದ ಪ್ರಮೋದಿಸಲು ಹಬ್ಬ ಹರಿದಿನಗಳು ಆಚರಣೆ ರೂಢಿಗೊಂಡಿಲ್ಲ. ಹಬ್ಬಗಳಾಚರಣೆಗಳು ನಮ್ಮ ಧರ್ಮದ ಅನುಷ್ಠಾನವೇ ಆಗಿದೆ. ಭಗವಂತನ ಹಿರಿಮೆ ಗರಿಮೆಗಳನ್ನು ಕೊಂಡಾಡುತ್ತ ಗತಕಾಲದ ಧಾರ್ಮಿಕ ಪರಂಪರೆಯನ್ನು ವಿಶ್ವಕ್ಕೆ ಪರಿಚಯಿಸುವುದೇ ಹಬ್ಬದಾಚರಣೆಯ ಪ್ರಧಾನ ಗುರಿ. ಧಾರ್ಮಿಕ ಭಾವನೆಗಳನ್ನು ಬೇರೂರಿಸಿ ಜೀವನ ಧರ್ಮವನ್ನು ಬೋಧಿಸುವ ಈ ಪರ್ವ ಕಾಲಗಳು ಇದರಲ್ಲಿ ಸವಿ ಬದುಕು ಪರದಲ್ಲಿ ಮೋಕ್ಷಗಳ ಹೆಗ್ಗುರಿಗಳನ್ನು ಹೊಂದಿದೆ. ದೇವಋಣ ಪಿತೃಋಣ ಹಾಗೂ ಋಷಿ ಋಣದಿಂದ ನಮ್ಮನ್ನು ವಿಮೋಚಿಸುವ ಇಂತಹ ಹಬ್ಬಗಳಲ್ಲಿ ಶ್ರಾವಣ ಶುದ್ಧ ಪಂಚಮಿಯ ದಿನ ಆಚರಿಸುವ ನಾಗರ ಪಂಚಮಿಯು ಒಂದಾಗಿದೆ. ಗರುಡ ಪಂಚಮಿಯೆಂದೂ ಈ ಹಬ್ಬ ಅಭಿದಾನ ಪಡೆದಿರುವುದು.

**ಗರುಡ ಪಂಚಮಿ :–** ನಾಗರ ಪಂಚಮಿ ನಾಡಿಗೆಲ್ಲ ದೊಡ್ಡದು. ಅಂದು ನಾರಿಯರೆಲ್ಲ ನಲಿ ನಲಿದಾರು ಎಂಬ ಜನಪದ ನುಡಿಯು ಈ ಪರ್ವಕಾಲ ವಿಶೇಷವಾಗಿ ಹೆಂಗಳೆಯರು ಹಾಗೂ ಸುಮಂಗಲಿಯರಿಗಾಗಿಯೇ ಮೀಸಲಾಗಿರಿಸುವ ಹಬ್ಬವೆಂದು ಪ್ರಚುರ ಪಡಿಸುವ ಹೆಗ್ಗಳಿಕೆಯ ನಾಣ್ಣುಡಿಯಾಗಿದೆ. ಅತ್ತೆಯ ಮನೆಯ ಮೊದಲಣ ಗಿತ್ತಿಯರು ತವರೂರಿಗೆ ತೆರಳಿ ಸಾಂಪ್ರದಾಯಿಕ ಶ್ರದ್ಧಾಭಕ್ತಿ ಹಾಗೂ ಸಡಗರದಿಂದ ಈ ಹಬ್ಬವನ್ನಾಚರಿಸುವರು.

ನಾಗಪ್ಪಗ್ಹಾಲ ಎರೆಯೋಣ
ನಾಗರ ಹೆಡಿಯಾಂಗ ಆಡೋಣ
ಮುಂದಿನ ನಾಗರ ಪಂಚಮಿಗೆ ಕೂಡೋಣ ನನ ಗೆಣತಿ

ಎಂದು ತೂಗುಉಯ್ಯಾಲೆ ಆಟವನ್ನು ಆಡುತ್ತ ಅಂದು ಈ ಜನಪದ ಗೀತೆಯನ್ನು ಆಡುವ ಹೆಂಗಳೆಯರು ಪರಸ್ಪರರನ್ನು ಬೀಳ್ಕೊಡುವ ದೃಶ್ಯ ನಯನ ಮನೋಹರ. ಹೆಣ್ಣುಮಕ್ಕಳು ಅಂದು ಅಶ್ವತ್ಥದ ಕಟ್ಟೆಯ ಇಲ್ಲವೇ ಹುತ್ತಿನ ಆಡಿದಾವರೆಯಲ್ಲಿ ತನಿ ಪೂಜೆ ಹಾಗೂ ಹರಕೆ ಮೊದಲಾದ ಸಾತ್ವಿಕ ಉಪಾಸನೆಯನ್ನು ಸಲ್ಲಿಸುವರು. ಹಾಲು ತುಪ್ಪ, ಕಡುಬುಗಳನ್ನು ಒಡಹುಟ್ಟಿದವರಿಗೆ ತಿನ್ನುಂಡಿಸಿ ಶುಭ ಹಾರೈಸುವ ಪರ್ವ ಕಾಲವಿದು.

ನಾಗರವ ಬಿಡಿಸಿ ಇಲ್ಲವೇ ಮಾಡಿಸಿ ಅದಕ್ಕೆ ತನಿಯನ್ನೆರೆಯುವರಲ್ಲವೆ, ಸೀರೆ ಕುಪ್ಪಸಗಳ ಬಾಗಿನವನ್ನು ತೋರಿಸುವರು. ನಾಗಪೂಜೆಯಿಂದ ಸರ್ಪಶಾಪದಿಂದ ವಿಮೋಚನೆಯಾಗುವುದಲ್ಲದೇ ಬಂಜೆತನ ನಿವಾರಣೆಯಾಗಿ ಸಂತಾನ ಪ್ರಾಪ್ತಿ ಲಭಿಸು ವದೆಂಬ ನಂಬಿಗೆ ನಾಗೋಪಾಸಕರಲ್ಲಿ ಆಳವಾಗಿ ಬೇರೂರಿರುವುದು. ತಮಿಳುನಾಡಿನ ಮುರುಗನ ಹಾಗೂ ದಕ್ಷಿಣ ಕನ್ನಡದ ಸುಬ್ರಹ್ಮಣ್ಯ ಸ್ವಾಮಿಗೆ ಗರುಡ ಪಂಚಮಿ ಯಂದು ಸಲ್ಲುವ ಸೇವಾ ಉಪಾಸನೆಗಳು ಅನುಪಮ ಹಾಗೂ ಅದ್ವಿತೀಯ.

ಹೊಲದಲ್ಲಿಯ ಹುಳ, ಹುಪ್ಪಡಿ ಹಾಗೂ ಇಲಿಗಳನ್ನು ಕಬಳಿಸಿ ಬೆಳೆಗಳನ್ನು ರಕ್ಷಿಸುವ ನಾಗ ರೈತರ ಪಾಲಿಗೆ ಕ್ಷೇತ್ರಪಾಲಕ ಎಂದೆನಿಸಿಕೊಂಡಿರುವುದರಿಂದ ರೈತ ಬಾಂಧವರು ನಾಗರ ಪಂಚಮಿಯಂದು ನಾಗಣ್ಣನಿಗೆ ಸಲ್ಲಿಸುವ ಪೂಜೆ ವೈಶಿಷ್ಟ್ಯ ಪೂರ್ಣ. ಕಡು ಬಡವನಾದರೂ ನಾಗರ ಪಂಚಮಿಯನ್ನು ಆಚರಿಸುವರೆಂಬ ಕಾರಣದಿಂದಲೇ ಪೈಸೆ ಇದ್ದರೆ ನಾಗರ ಪಂಚಮಿ ಎಂಬ ಜನಪದ ನುಡಿಯು ಕನ್ನಡ ಸಾಹಿತ್ಯದಲ್ಲಿ ಪಡಿಮೂಡಿರುವುದು.

**ಪರ್ವಕಾಲದ ವಿಸ್ತರಣಾಚರಣೆ :–** ಕನ್ನಡ ನಾಡಿನಲ್ಲಿ ಈ ಹಬ್ಬದ ಆಚರಣೆಯು ಮೂರು ನಾಲ್ಕು ದಿವಸದವರೆಗೆ ಪಸರಿಸಿರುವುದು. ರೊಟ್ಟಿಯ ಹಬ್ಬ, ನಾಗಚೌತಿ, ನಾಗ ಪಂಚಮಿ ಹಾಗೂ ಸಿರಿಯಾಳ ಷಷ್ಠಿಗಳಾಚರಣೆಗಳು ನಾಗರ ಪಂಚಮಿಯ ವಿಸ್ತರಣೆಯ ಪರ್ವಕಾಲಗಳೇ ಆಗಿರುವುವು.

ಶ್ರಾವಣ ಶುದ್ಧ ತದಿಗೆಯ ದಿನ ರೊಟ್ಟಿಯ ಹಬ್ಬ. ಅಂದು ಗೋಧಿ, ಜೋಳ, ಸಜ್ಜೆಯ ರೊಟ್ಟಿ ವಿವಿಧ ಬಗೆಯ ಉಸುಳಿ ಪಚ್ಚಡಿಗಳನ್ನು ಮಾಡಿ ಮನೆಯ ದೇವರ ನೈವೇದ್ಯದೊಂದಿಗೆ ಒಡಹುಟ್ಟಿದವರಿಗೆ ಪಕ್ವಾನ್ನ ಭೋಜನ ನಡೆಯುವುದು.

ನಾಲ್ಕನೇ ದಿನ ನಾಗ ಚೌತಿಯಲ್ಲಿ ಬೆಳಗಿನ ಜಾವ ನಾಗೋಪಾಸಕರು ಸಾಂಪ್ರ ದಾಯಿಕ ಪೋಷಾಕನ್ನು ಧರಿಸಿ ಉಂಡಿ ಉಸುಳಿಯನ್ನು ತಿನ್ನುವರಲ್ಲದೆ ಶಿಷ್ಟಾಚಾರಿ ಗಳಿಗೆ ಅಂದು ಉಪವಾಸ ದಿನ. ನಾಗಪ್ಪನನ್ನು ಅರಿಸಿನ ಕುಂಕುಮ ಹಾಗೂ ಹೂವು ಗಳಿಂದ ಸಿಂಗರಿಸಿ ಪೂಜಿಸುವರು. ಉಂಡಿ, ಉಸುಳಿಗಳ ನೈವೇದ್ಯವನ್ನು ಸಲ್ಲಿಸಿ ತನ್ನಿಯನ್ನೆರೆಯುವರು.

ಐದನೇ ದಿನ ನಾಗ ಪಂಚಮಿ ಜಲ ದೇವತೆಯಾದ ಹೊಳೆ ಗಂಗವ್ವನ ಪೂಜೆ. ಅಂದು ಅದ್ದೂರಿಯಾಗಿ ವಿಜ್ರಂಭಿಸುವುದು. ಸುಮಂಗಲಿಯರು ಪೂಜೆಯನ್ನು ಸಲ್ಲಿಸಿ ದೇವತೆಗೆ ಸೀರೆ ಕುಪ್ಪಸಗಳ ಬಾಗಿನವನ್ನು ನೀಡುವರು. ಕಚ್ಚಿದ ಕಡುಬು ಹುಣಿಸೇ ಅಡಿಗೆ ಜೊಲ್ಲು ಸುರಿಸುವ ಪಕ್ವಾನ್ನಗಳು ಹಬ್ಬಕ್ಕೆ ಮೆರುಗುಗಳನು ನೀಡುವ ವೈಶಿಷ್ಟ್ಯಗಳಾಗಿವೆ.

ಆರನೇ ದಿನವನ್ನು ಸಿರಿಯಾಳ ಪಷ್ಠಿಯನ್ನಾಗಿ ಆಚರಿಸುವರು. ಭೂದೇವತೆ ಯಿಂದ ವಿಪುಲ ಬೆಳೆಯನ್ನು ಪಡೆಯುವ ಭರವಸೆಯ ಹಿನ್ನೆಲೆಯಲ್ಲಿ ಆಚರಿಸಲ್ಪಡುವ ಈ ಹಬ್ಬಕ್ಕಾಗಿ ನಾಗಾರಾಧಕರು ವೆಚ್ಚಕ್ಕಾಗಿ ಕೈಯನ್ನು ಸಡಿಲಿಸುವುದು ಅವರ ಧಾರ್ಮಿಕ ನಿಷ್ಠೆಯ ಔದಾರ್ಯದ ದ್ಯೋತಕವೇ ಆಗಿರುವುದು.

**ನಾಗರ ಪಂಚಮಿ ನಡೆದ ಹಾದಿ :–** ನಾಗರ ಪಂಚಮಿಯ ಆಚರಣೆ ರೂಢೀಕೃತ-ಗೊಂಡಿದ್ದರ ಸುತ್ತಲೂ ಹಲವಾರು ಪೌರಾಣಿಕ ಹಾಗೂ ದಂತ ಕಥೆಗಳು ಹೆಣೆದಿವೆ.

ಅಕ್ಕೆಂಜಿ ಎಂಬ ಓರ್ವ ಹೆಣ್ಣು ಮಗಳು ಶ್ರಾವಣ ಶುದ್ಧ ಚವತಿಯಂದು ನಾಗೋಪಾಸನೆಗಾಗಿ ತನಿಎರೆಯಲು ಅಣ್ಣನನ್ನು ತಾಳಿ ಹೂ ತರಲು ಕಳಿಸಿದಾಗ ಸರ್ಪ ಬಂದು ಅವನನ್ನು ಕಚ್ಚಿ ಸಾಯಿಸುವದು. ದುಃಖತೃಪ್ತ ತಂಗಿ ಅಕ್ಕೆಂಜಿ ಅಣ್ಣನಿಗೆ ಜೀವದಾನ ನೀಡಲು ನಾಗಣ್ಣನಿಗೆ ತನಿವೆರೆದು ಪ್ರಾರ್ಥಿಸಿದಾಗ ಅವಳ ಭಯಭಕ್ತಿಗೆ ಮೆಚ್ಚಿದ ಶೇಷರಾಜನು ವಿಷವನ್ನೆಲ್ಲ ಹೀರಿ ಅವಳ ಒಡಹುಟ್ಟಿದ ಒಡಹುಟ್ಟಿದ ಅಣ್ಣ-ನನ್ನು ಬದುಕಿಸಿ ಕೃತಾರ್ಥನಾಗುವನು. ಅಂದಿನಿಂದ ಜನಾದರಣೀಯವಾದ ಈ ಗರುಡ ಪಂಚಮಿ ಒಡ ಹುಟ್ಟಿದವರ ಪ್ರೀತಿ ವಿಶ್ವಾಸದ ಕುರುವಾಗಿ ಆಚರಿಸಲ್ಪಡುತ್ತಿದೆ.

**ಮಹಾಭಾರತದ ಕಥಾನಕ :–** ನಾಗ ಹಾಗೂ ಆರ್ಯರಿಗೆ ಹಗೆತನ ತಲೆದೋರಿದಾಗ ನಾಗರಾಜ ಪರೀಕ್ಷಿತನನ್ನು ತನ್ನ ವಿಷದಿಂದ ಸಾಯಿಸುತ್ತಾನೆ. ಪರೀಕ್ಷಿತನ ಮಗ ಜನಮೇಜಯ ನಾಗವಂಶ ನಿರ್ಮೂಲ ಗೊಳಿಸಲು ಸರ್ಪ ಯಾಗ ಮಾಡಿದಾಗ ಸರ್ಪ ರಾಜನು ದೇವೇಂದ್ರನ ಆಶ್ರಯವನ್ನು ಪಡೆದನು. ತಕ್ಷಕನನ್ನು ಒಡಗೂಡಿ ಇಂದ್ರನು ಬರಬೇಕೆಂದು ಬ್ರಾಹ್ಮಣರು ಮಂತ್ರ ಘೋಷ ಆರಂಭಿಸಿದಾಗ ಇಂದ್ರನ ಆ ಸ್ಥಾನ ಕಲ್ಲೋಲಕಲ್ಲೋಲಗೊಂಡಿತು. ದುರಂತವನ್ನು ನಿವಾರಿಸಲು ಇಂದ್ರ ಹಾಗೂ ನಾಗ-ರಾಜರಿಬ್ಬರೂ ಆಸ್ತಿಕ ಋಷಿಯ ತಾಯಿ ನಾಗಕನ್ಯೆ ಹಾಗೂ ತಂದೆ ಆರ್ಯ ಕುಲದವ-ರಾದ್ದರಿಂದ ಈ ಋಷಿಯ ಮಧ್ಯಸ್ಥಿಕೆಯಿಂದಾಗಿ ಜನ ಮೇಜರಾಯನ ಕ್ರೋಧಾಗ್ನಿ ಶಮನವಾಗುವುದು. ತಕ್ಷಕನು ತನ್ನ ವಿಷಪಾನ ಮಾಡಿ ಪರೀಕ್ಷಿತನಿಗೆ ಜೀವದಾನ ಮಾಡುವನು.

ಅಂದಿನಿಂದ ನಾಗಕುಲಕ್ಕೆ ಗೌರವದ ದ್ಯೋತಕವಾಗಿ ನಾಗರಪಂಚಮಿಯು ಆರ್ಯರಿಂದ ಆಚರಿಸಲ್ಪಡುತ್ತದೆ.

**ಜಾನಪದ ಕಥೆ :–** ಒಕ್ಕಲಿಗನೋರ್ವನ ರಂಟೆಗೆ ತಗಲಿ ಸರ್ಪ ಬಂದು ಅಸುನೀಗಿ-ದಾಗ ಅದರ ತಾಯಿ ಆವನ ಕುಟುಂಬದವರಿಗೆಲ್ಲ ಕಚ್ಚಿ ಸಾಯಿಸುವುದು. ದೂರದಲ್ಲಿ ಇರುವ ಒಕ್ಕಲಿಗನ ಮಗಳನ್ನು ಕೊಲ್ಲಲು ನಾಗಿನಿ ಪಯಣಿಸಿತು. ಮೃಣ್ಮಯ ನಾಗ-ಮೂರ್ತಿಹಾಲೆರೆಯುತ್ತಿರುವ ಒಕ್ಕಲಿಗನ ಮಗಳನ್ನು ಕಂಡು ನಾಗಿನಿಯ ಕ್ರೋಧಾಗ್ನಿ ಇಳಿಯುವುದು. ಅವಳ ಕುಟುಂಬದ ಮೇಲೆ ತಾನು ಎಸಗಿರುವ ಸಾಮೂದಹಿಕ ಹತ್ಯೆಯ

ವೃತ್ತಾಂತವನ್ನು ನಾಗಿನಿ ಸಲ್ಲಿಸಿದಾಗ ರೈತ ಮಗಳು ಗೋಳಿಡಲು ಆರಂಭಿಸಿದಳು. ಮನೆಯ ಮಂದಿಗೆಲ್ಲ ಜೀವದಾನ ನೀಡಲು ಅಂಗಲಾಚಿ ರೈತ ಮಗಳು ಬೇಡಿದಾಗ ಅನುಕಂಪಗೊಂಡ ನಾಗಿನಿ ವಿಷವನ್ನು ಹೀರಿ ಜೀವದಾನವನ್ನು ನೀಡುವಳು.

ಪುನರ್ಜೀವದಾನ ಪಡೆದ ಕುಟುಂಬದ ಸಕಲ ಸದಸ್ಯರು ನಾಗಿನಿಗೆ ಸಾಮೂಹಿಕ ಪೂಜೆಯನ್ನು ಸಲ್ಲಿಸಿದರ ಹಿನ್ನೆಲೆಯಲ್ಲಿ ನಾಗರಪಂಚಮಿಯ ಹಬ್ಬ ರೂಢಿಕೃತವಾಗಿ ಆಚರಣೆಗೊಂಡಿತ್ತು.

ಸಿರಿವಂತರ ಮನೆಯ ಸೊಸೆಯಾಗಿರುವ ತಂಗಿಯನ್ನು ಅತ್ತೆಯ ಮನೆಯಿಂದ ತವರೂರಿಗೆ ಗಾಡಿಯ ಮೇಲೆ ತರುತ್ತಿರುವಾಗ ಕಡುಬಡವ ಅಣ್ಣನೋರ್ವನು ಅವಳ ಮೈಮೇಲಿನ ಆಭರಣದ ಆಮಿಷಕ್ಕೆ ಒಳಗಾಗಿ ನಡುಮಧ್ಯದಲ್ಲಿ ಗಾಡಿಯನ್ನು ನಿಲ್ಲಿಸಿ ಆಭರಣವನ್ನು ತನಗೆ ನೀಡೆಂದು ಸೋದರಿಯನ್ನು ಪೀಡಿಸುತ್ತಾನೆ ಆಭರಣವನ್ನು ನೀಡಲು ಒಲ್ಲದ ಸೋದರಿಯನ್ನು ಕೊಲ್ಲಲು ಕಲ್ಲೆತ್ತಿದಾಗ ಕಾಳಿಂಗ ಸರ್ಪ ಬಂದು ಅವನನ್ನು ಕಚ್ಚಿ ಸಾಯಿಸುವುದು. ದುಃಖಿತ ಸೋದರಿ ನಾಗಪ್ಪನನ್ನು ಪ್ರಾರ್ಥಿಸಿ ಅಣ್ಣನಿಗೆ ಪುನರ್ಜೀವ ದಾನ ಪಡೆದಳು.

ಅಂದಿನಿಂದ ಅತ್ತೆಯ ಮನೆಯ ಮೊದಲಣಗಿತ್ತಿಯರು ತವರು ಮನೆಗೆ ಗರುಡ ಪಂಚಮಿಗೆ ಬರುವ ವಾಡಿಕೆಯಾಗುವುದರ ಜೊತೆಗೆ ನಾಗರ ಪಂಚಮಿಯ ಆಚರಣೆ ರೂಢಿಗೊಂಡಿತು.

**ನಾಗರಾಧಕರು :** ಜೈನ, ಬೌದ್ಧ, ವೈಷ್ಣವ, ಗಾಣಪತ್ಯ ಶಾಕ್ತೇ, ಹಾಗೂ ಅನ್ಯ ಪಂಥೀಯರು ನಾಗಾರಾಧನೆಗೆ ಅಧಿಕ ಒತ್ತನ್ನು ನೀಡಿರುವುದು. ಭಾರತದ ಮೂಲ ನಿವಾಸಿ ದ್ರಾವಿಡರು ನಾಗೋಪಾಸಕರು. ಅವರ ಕಾಲದಿಂದ ರೂಢಿಸಿಕೃತವಾಗಿ ಆಚರಣೆಗೊಂಡ ಈ ಹಬ್ಬವನ್ನು ಭಾರತವನ್ನು ಪ್ರವೇಶಿಸಿರುವ ಆರ್ಯರು ಜನಾದರಣೀಯಗೊಳಿಸಿದರು, ಹರಪ್ಪ ನಗರದಲ್ಲಿ ನಾಗಾರಾಧನೆಯು ಪ್ರಚಲಿತ ಇರುವ ವಿಷಯಕ್ಕೆ ಉತ್ಖನನ ಕಾಲದಲ್ಲಿ ದೊರಕಿರುವ ಅವಶೇಷಗಳು ಸಾಕ್ಷ್ಯಾಧಾರಗಳು ನೀಡಿವೆ. ತೈತರೀಯ ಉಪನಿಷತ್ತಿನಲ್ಲಿ ನಾಗಾರಾಧನೆಯ ಉಲ್ಲೇಖಗಳಿವೆ. ಮಹಾಕಾವ್ಯ ಜನಪದ ಹಾಗೂ ಪುರಾಣಗಳಲ್ಲಿ ಆರ್ಷೇಯವಾಗಿ ನಾಗಾರಾಧನೆ ಪ್ರಚಲಿತ ಇರುವ ವಿಪುಲ ದಾಖಲೆಗಳು ಲಭ್ಯವಾಗಿವೆ.

ನಮ್ಮ ದೇಶದಲ್ಲಿ ನಾಗವಂಶಗಳಿರುವ ಉಲ್ಲೇಖಗಳನ್ನು ಇತಿಹಾಸದ ಪುಟಗಳೇ ನುಡಿಯುತ್ತಿವೆ. ಭಾರತದ ನಾಗಲ್ಯಾಂಡ ನಾಗವಂಶಜರಿಗಾಗಿಯೇ ರಚಿತವಾದ ಪ್ರತ್ಯೇಕ ರಾಜ್ಯ. ಶಿಲಾಪಾರರು ಹಾಗೂ ಚೂಟ ರಾಜಮನೆತನಗಳು ನಾಗವಂಶೀಯರೇ ಆಗಿರುವರು. ಕೇರಳ ಹಾಗೂ ಅಸ್ಸಾಂಗಳಲ್ಲಿ ನಾಗವಂಶೀಯರು ಅಧಿಕ ಸಂಖ್ಯೆಯಲ್ಲಿ

ವರು. ಮಣಿಪುರಿಯರು ನಾಗನ ತಂಗಿಯಾದ ಮನಸಾ ಎಂಬ ಸರ್ಪವನ್ನು ಜಿಸುತ್ತಾರೆ. ಸಂಗೀತ, ವಾಸ್ತುಶಿಲ್ಪ, ನೃತ್ಯ ಹಾಗೂ ಮೊದಲಾದ ಲಲಿತ ಕಲೆಗ ತಮ್ಮದೇ ಆದ ಶೈಲಿಯಲ್ಲಿ ನಾಗವಂಶಜರು ಕೊಡುಗೆಯನ್ನು ನೀಡಿರುವರು. ಲುಪಿ, ಚಿತ್ರಾಂಗದೆ ನಾಗಕನ್ಯೆಯರನ್ನು ಅರ್ಜುನ ವರಿಸಿಕೊಂಡಿರುವುದನ್ನು ಹಾಭಾರತವೇ ಕಥೈಸುವುದು.

ಔರಂಗಾಬಾದದ ಅಜಂತಾ ಗುಹಾಂತರ ದೇವಾಲಯ ನಾಗರ ದೊರೆಗಳನ್ನು ಚಯಿಸಿ ನಮ್ಮನ್ನು ನಾಗಲೋಕಕ್ಕೆ ಒಯ್ಯುವ ಚಿತ್ರಾಗಾರವೇ ಆಗಿರುವುದು.

**ಗಲೋಕ :** ಅನಂತ ತಕ್ಷಕ ಹಾಗೂ ವಾಸುಕಿ ಎಂದು ಮೆರೆದಿರುವ ಆದಿಶೇಷ ಡಲಿನಿ ಶಕ್ತಿಯ ಸಂಕೇತ. ತನ್ನ ಯೋಗ ಬಲದಿಂದ ಪಾತಾಳದಿಂದ ಶಿರದ ಧರೆಯನ್ನು ಹೊತ್ತಿರುವನಲ್ಲದೆ ಶಿವನಾಜ್ಞೆಯೆಂತೆ ವಿಷ್ಣುವಿಗೆ ಶೇಷಶಯನನಾಗಿರುವನು ುದ್ರ ಮಂಥನ ಕಾಲದಲ್ಲಿ ಮಂದರ ಪರ್ವತದ ಕಡೆಗೋಲಿಗೆ, ಹಗ್ಗವಾಗಿಯೂ ುರನ ಸಂಹಾರಕ್ಕಾಗಿ ಮೇರುವೆಂಬ ಬಿಲ್ಲಿಗೆ ಹೆಡೆಯಾಗಿ ಮೆರೆದಿರುವನು. ಗರುಡನ ಟಳಕ್ಕೆ ಒಳಗಾದಾಗ ಶಿವನ ಶ್ರೀರಕ್ಷೆ ಕೇಳಿದಾತನಿವನು. ಗರುಡ ಸರ್ಪಗಳೀರ್ವರು ್ ದ್ವೇಷಗಳನ್ನು ಮರೆತು ವಿಷ್ಣುವಿಗೆ ವಾಹನವಾಗಿರುವುದು ದೇವಸಾನ್ನಿಧ್ಯದಲ್ಲಿ ವೂ ಅಮೃತವಾಗಿರುವುದಕ್ಕೆ ಇದೊಂದು ನಿದರ್ಶನ.

ಯಮುನಾ ನದಿಯ ನೀರನ್ನು ವಿಷ ಪೂರಿತಗೊಳಿಸುತ್ತಿರುವ ಕಾಳಿಂಗವನ್ನು ಯಲ್ಲಿ ಧುಮುಕಿ ಬಾಲಕೃಷ್ಣನು ಮರ್ಧಿಸಿರುವ ಕಥೆ ನಮ್ಮೆಲ್ಲರಿಗೂ ಸುಪರಿಚಿತ. ನಿಗೆ ಕಂಠಾಭರಣವಾಗಿ ಲಂಬೋಧರನಿಗೆ ಹೊಟ್ಟೆಯ ಕಟ್ಟಾಗಿ, ಪಾರ್ಶ್ವನಾಥನ ಯ ಮೇಲೆ ಹೆಡೆಯನ್ನರಳಿಸಿ, ಚಾತುರ್ಮಾಸಕ್ಕಾಗಿ ವಿಷ್ಣುವಿಗೆ ಶೇಷಶಾಯಿ ರಿದು ಪುನೀತಗೊಂಡ ಆದಿಶೇಷನ ಪೂಜಾ ಉಪಾಸನೆಗಳು ಭಾರತೀಯರಿಗೆ ಾದರಣೀಯವಾಗಿವೆ.

---

ಕಲ್ಲ ನಾಗರ ಕಂಡರೆ ಹಾಲನೆರೆ ಎಂಬರು
ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ
ಉಂಬುವ ಜಂಗಮ ಬಂದರೆ ನಡೆ ಎಂಬರಯ್ಯ
ಉಣ್ಣದ ಲಿಂಗಕೆ ಬೋನವ ಹಿಡಿ ಎಂಬರಯ್ಯ
ನಮ್ಮ ಕೂಡಲ ಸಂಗನ ಶರಣರ ಕಂಡು
ಉದಾಸೀನ ಮಾಡಿದರೆ
ಕಲ್ಲ ತಾಗಿದ ಮಿಟ್ಟೆಯಂತಪ್ಪರಯ್ಯ

—ಬಸವಣ್ಣನವರು

# ಕ್ಷೇತ್ರವಾರ್ತೆ

–ಹೆಚ್. ಬಿ. ಗಂಗಾಧರಯ

ಶ್ರೀ ಮಠದ ಸನಿವಾಸ ವಿದ್ಯಾಸಂಸ್ಥೆಗಳ ಸಂಯುಕ್ತ ವಿದ್ಯಾರ್ಥಿ ಸಂಘ ಉದ್ಘಾಟನಾ ಸಮಾರಂಭ 28, ಜುಲೈ 1995 ಶುಕ್ರವಾರ ತ್ರಿವಿಧ ದಾಸೋ ಮೂರ್ತಿಗಳಾದ ಡಾ|| ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ದಿವ್ಯ ಸಾನಿಧ್ಯ ನಡೆಯಿತು.

ಜ್ಯೋತಿ ಬೆಳಗಿಸುವುದರೊಂದಿಗೆ ಉದ್ಘಾಟನೆಯನ್ನು ಶ್ರೀ ಎಸ್. ಎಂ. ಬಿದ ಐ. ಪಿ. ಎಸ್, ಡೆಪ್ಯೂಟಿ ಇನ್‌ಸ್ಪೆಕ್ಟರ್ ಜನರಲ್ ಆಫ್ ಪೊಲೀಸ್, ಮೈಸೂ ಅವರು ನೆರವೇರಿಸಿ ಮಾತನಾಡಿದರು. ಪೂಜ್ಯ ಶ್ರೀ ಶ್ರೀಗಳು ಸಿದ್ಧಗಂಗೆ ಶ್ರೀ ಮ ಪೀಠಾರೋಹಣದ 65 ವರ್ಷಗಳಲ್ಲಿ ಮಾಡುತ್ತಿರುವ ಸೇವೆ ವೈವಿಧ್ಯವಾಗಿದೆ. ಸಹ ಸಹಸ್ರ ವಿದ್ಯಾರ್ಥಿಗಳ ಮತ್ತು ಸಮಾಜದ ಸರ್ವಾಂಗೀಣ ಅಭಿವೃದ್ಧಿಗೆ ಕಾರಣಕ ರಾಗಿದ್ದಾರೆ. ಭೇದಭಾವವಿಲ್ಲದೆ ಎಲ್ಲಾ ಕೋಮಿನವರಿಗೂ ಶಿಕ್ಷಣಕ್ಕೆ ಅವಕಾಶ ಮಾ ಕೊಟ್ಟಿದ್ದಾರೆ.

ಶ್ರೀ ಮಠದಲ್ಲಿ ನೈತಿಕ ಮತ್ತು ಆಧ್ಯಾತ್ಮಿಕ ಶಕ್ತಿ ಸಂಸ್ಕಾರ ಸಿಕ್ಕಿದೆ. ಭೌ ಜ್ಞಾನಕ್ಕೆ ಶಿಕ್ಷಣ ದೊರೆಯುತ್ತಿದೆ, ಕೀಳರಿಮೆ ತೊರೆದು ವಿದ್ಯಾರ್ಥಿಗಳು ನಾ ಯಾವುದರಲ್ಲಿಯೂ ಕಡಿಮೆ ಇಲ್ಲ ಎಂಬ ಭಾವನೆ ಉಳ್ಳವರಾಗಬೇಕು. ಉತ್ತ ನಡೆ-ನುಡಿ ಎಲ್ಲರಿಗೂ ಅವಶ್ಯಕ. ನಿತ್ಯ ಜೀವನದಲ್ಲಿ ಮೋಸವಿಲ್ಲದೆ ಪ್ರಾಮಾಣಿ ಯಿಂದ ಕೆಲಸ ಮಾಡಬೇಕು. ಪ್ರತಿಫಲಾಪೇಕ್ಷೆಯಿಲ್ಲದೆ ಉತ್ತಮ ಆಚಾರ ವಿಚಾರಗ ಅಳವಡಿಸಿಕೊಂಡು ಯೋಗ್ಯ ನಾಗರಿಕರಾಗಿ ಬಾಳುವ ಕಲೆ ಕಲಿಯಬೇಕು. ಕೇ ಆರ್ಥಿಕ ಪ್ರಗತಿಯೇ ಜೀವನದ ಗುರಿಯಲ್ಲ. ನಿಮ್ಮ ನೆರೆಹೊರೆಯವರಲ್ಲಿ ಪ್ರಿ ವಿಶ್ವಾಸದಿಂದ ವರ್ತಿಸಬೇಕು. ನಿಮ್ಮ ಶಕ್ತಿ ಸಾಮರ್ಥ್ಯಗಳನ್ನು ನೀವೇ ಗುರು ಕೊಂಡು ಯೋಗ್ಯ ಸರ್ಟಿಫಿಕೇಟುಗಳನ್ನು ಬರೆದುಕೊಳ್ಳಬೇಕು. ಇಂತಹ ಶಕ್ತಿಯ ದೇವರು ಎಲ್ಲರಿಗೂ ಸಮಾನವಾಗಿ ಕೊಟ್ಟಿದ್ದಾನೆ. ಛಲದಿಂದ ಸಾಧಿಸಬೇಕು.

ಶ್ರೀ ಶ್ರೀಗಳ ಮತ್ತು ಶ್ರೀ ಮಠದ ಕೀರ್ತಿ ರಾಜ್ಯಾದ್ಯಂತ ಹರಡಿದೆ. ವಿದ್ಯಾ ಗಳಾದ ನೀವು ಇನ್ನೂ ಹೆಚ್ಚು ಹೆಚ್ಚಾಗಿ ಬೆಳೆಸಿ ಬೆಳಗಿಸಬೇಕು. ಎಲ್ಲರಿಗೂ ಶ್ರೀಗಳ ಅನುಗ್ರಹ ಆಶೀರ್ವಾದ ಶ್ರೀರಕ್ಷೆಯಾಗಿದೆ ಎಂದು ಹೇಳಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಶ್ರೀ ಕೆ. ಎಂ. ಶಿವಕುಮಾರ್, ಐ.ಎ.ಎಸ ಮ್ಯಾನೇಜಿಂಗ್ ಡೈರೆಕ್ಟರ್, ಮೈಸೂರು ಸೇಲ್ಸ್ ಇಂಟರ್ ನ್ಯಾಷ್‌ನಲ್ ಲಿಮಿಟೆ ಬೆಂಗಳೂರು ಅವರು ಮಾತನಾಡಿ ಇಲ್ಲಿಯ ವಿದ್ಯಾರ್ಥಿಗಳಿಗೆ ಶ್ರೀ ಮಠದಲ್ಲಿ ಒಳ್ಳೆ ವಾತಾವರಣ ಸಿಕ್ಕಿದೆ. ಕಷ್ಟಪಟ್ಟು ವ್ಯಾಸಂಗ ಮಾಡಿ ಉತ್ತಮ ವ್ಯಕ್ತಿತ್ವ ರೂಪಿ

ಕೊಂಡು ಸುಸಂಸ್ಕೃತ ನಾಗರಿಕರಾಗಬೇಕು. ಇತ್ತೀಚಿಗೆ ಪಾಶ್ಚಿಮಾತ್ಯರನ್ನು ನಾವು ಟೀಕಿಸುತ್ತೇವೆ. ಅವರು ಉತ್ತಮ ಸುಸಂಸ್ಕೃತರು. ಅವರಲ್ಲಿ ಮಾನವೀಯ ಅನುಕಂಪ ಹೆಚ್ಚು ಪ್ರಮಾಣದಲ್ಲಿದೆ, ಸರ್ವರ ಕ್ಷೇಮದ ಬಗ್ಗೆ ಅವರು ಚಿಂತನೆ ಮಾಡುತ್ತಾರೆ. ನಮ್ಮಂತೆ ಎಲ್ಲರೂ ಸೌಲಭ್ಯಗಳನ್ನು ಹೊಂದಿ ಬಾಳಬೇಕು ಎಂಬ ಆಕಾಂಕ್ಷೆ ಬೇಕು.

ಶ್ರೀ ಮಠದ ಅದ್ಭುತ ಸಾಧನೆಗಳನ್ನು ನೋಡಿ ದಿಗ್ಭ್ರಮೆಯಾಗಿದೆ. ಇಂತಹ ದೊಡ್ಡ ಸೇವಾ ಕ್ಷೇತ್ರ ಎಲ್ಲಿಯೂ ಕಾಣಲು ಸಾಧ್ಯವಿಲ್ಲ. ಸರ್ಕಾರದಿಂದಲೂ ಈ ಮಹಾನ್ ಕಾರ್ಯಗಳನ್ನು ಪ್ರಾಮಾಣಿಕವಾಗಿ ವ್ಯವಸ್ಥಿತವಾಗಿ ಮಾಡಲು ಅಸಾಧ್ಯವಾಗುತ್ತದೆ. ವೀರಶೈವ ಮಠಗಳ ಕೊಡುಗೆ ನಾಡಿಗೆ ಮತ್ತು ಸಮಾಜಕ್ಕೆ ಉನ್ನತವಾಗಿವೆ. ಶ್ರೀ ಮಠವನ್ನು ದೊಡ್ಡ ಪ್ರಮಾಣದಲ್ಲಿ ಮುನ್ನಡೆಸುತ್ತಿರುವ ಶ್ರೀ ಶ್ರೀಗಳವರ ದರ್ಶನ ಪಡೆದಿದ್ದು ನನ್ನ ಪುಣ್ಯದ ಫಲವೆಂದು ಹೇಳಿದರು.

**ಶ್ರೀ ಶ್ರೀಗಳು** ಆಶೀರ್ವಚನ ನೀಡುತ್ತಾ ಅನುಭವದ ಮಾತುಗಳು ಆತ್ಮ ವಿಶ್ವಾಸ ಮತ್ತು ಸ್ವಾಭಿಮಾನ ಬೆಳೆಸುತ್ತವೆ. ಇಂದು ಮನುಷ್ಯತ್ವ ನಾಶವಾಗಿದೆ. ವಿದ್ಯಾರ್ಥಿಗಳು ಸುಧಾರಣೆ ಹೊಂದಬೇಕು. ಇದಕ್ಕೆ ಸ್ಥಿರಸಂಕಲ್ಪ ಅಗತ್ಯ. ವಿದ್ಯಾರ್ಥಿ ಸಂಘದ ಉದ್ಘಾಟನೆಯಾಗಿದೆ. ಸರ್ವತೋಮುಖ ವ್ಯಕ್ತಿತ್ವ ಮತ್ತು ಬೆಳವಣಿಗೆಗಾಗಿ ಆಸಕ್ತಿಯಿಂದ ಶಾಲಾ ಚಟುವಟಿಕೆಗಳಲ್ಲಿ ಭಾಗವಹಿಸಬೇಕು ಎಂದು ಕರೆಯಿತ್ತರು.

ಸಮಾರಂಭದಲ್ಲಿ ಕಿರಿಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು, ಶ್ರೀ ಶ್ರೀಗಳವರ ವಜ್ರಮಹೋತ್ಸವ ನಿಧಿ ಕಾರ್ಯಾಧ್ಯಕ್ಷರಾದ ಶ್ರೀ ಬಿ ಎಸ್. ಮುದ್ದಪ್ಪ, ಐ.ಎ.ಎಸ್. ಕಾರ್ಯದರ್ಶಿ ಶ್ರೀ ಎಸ್. ಎಸ್. ಹಸಬಿ, ಇಂಜಿನಿಯರ್ ಶ್ರೀ ನಾಗರಾಜಯ್ಯ ಮತ್ತು ಎಸ್. ಐ. ಟಿ. ತಾಂತ್ರಿಕ ನಿರ್ದೇಶಕರಾದ ಶ್ರೀ ಪರಮೇಶ್ವರಪ್ಪ ಇವರುಗಳು ಉಪಸ್ಥಿತರಿದ್ದರು.

ಪ್ರಾರಂಭದಲ್ಲಿ ಶ್ರೀ ಬಿ. ಸಿದ್ದಬಸಪ್ಪ ಸ್ವಾಗತ ಕೋರಿದರು. ಶ್ರೀ ಹೆಚ್. ಬಿ. ಗಂಗಾಧರಯ್ಯ ಮತ್ತು ಶ್ರೀ ಹಸಬಿಯವರು ಅತಿಥಿಗಳನ್ನು ಪರಿಚಯಿಸಿದರು. ಶ್ರೀ ಡಿ. ಎಸ್. ನಾಗರಾಜರಾವ್ ವಂದನೆ ಸಲ್ಲಿಸಿದರು. ಶ್ರೀ ಜಿ. ಕೆ. ಕುಮಾರಸ್ವಾಮಿ ಕಾರ್ಯಕ್ರಮ ನಿರೂಪಿಸಿದರು.

# -: ಸ್ಮರಣೆ :-



ಶ್ರೀ ಬಿ. ಹೊನ್ನಪ್ಪ, ನಿವೃತ್ತ ಶಿಕ್ಷಕರು, ಬೈಚಾಪುರ, ತುಮಕೂರು ತಾಲ್ಲೂಕು, 6ಜುಲೈ 1995, ಗುರುವಾರ ಶಿವೈಕ್ಯರಾದರು. ಇವರಿಗೆ 87 ವರ್ಷ ವಯಸ್ಸಾಗಿತ್ತು. ಶ್ರೀ ಮಠದ ಹಳೆಯ ವಿದ್ಯಾರ್ಥಿಯಾಗಿ ಇಲ್ಲಿಯ ಪರಿಸರದಲ್ಲೇ ಬೆಳೆದು ಬಂದವರು. ಹೊನ್ನಪ್ಪ ಮೇಷ್ಟ್ರು" ಎಂದು ಶ್ರೀ ಮಠದಲ್ಲಿ ಪ್ರಖ್ಯಾತರಾಗಿದ್ದರು. ವಿಶೇಷವೆಂದರೆ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಸಮಕಾಲೀನರು.

ಇವರು ಪೂಜ್ಯ ಶ್ರೀ ಶ್ರೀಗಳವರ ಸಮೀಪವರ್ತಿಯಾಗಿದ್ದು ಶ್ರೀಮಠದ ಎಲ್ಲಾ ಕಾರ್ಯಚಟುವಟಿಕೆಗಳಲ್ಲಿ ಮೇಲ್ವಿಚಾರಕರಾಗಿ ಸಕ್ರಿಯವಾಗಿ ಪಾತ್ರ ವಹಿಸುತ್ತಿದ್ದರು. ಮೃದು ಸ್ವಭಾವ, ಮತ್ತು ಪ್ರಾಮಾಣಿಕತೆಗೆ ಹೆಸರಾಗಿದ್ದರು. ಎಲ್ಲರೊಡನೆ ಮಧುರ ಬಾಂಧವ್ಯ ಹೊಂದಿ ಶಿಕ್ಷಕರ ವಿದ್ಯಾರ್ಥಿ ಸಮುದಾಯದ ಪ್ರೀತಿ ವಿಶ್ವಾಸಕ್ಕೆ ಪಾತ್ರರಾಗಿದ್ದರು. ತಮ್ಮ ವ್ಯಕ್ತಿತ್ವದ ಪ್ರಭಾವದಿಂದ ಶ್ರೀಮಠದ ಎಲ್ಲ ಕಾರ್ಯಕರ್ತರಲ್ಲಿ ಸೌಹಾರ್ದತೆ ಮತ್ತು ಸದ್ಭಾವನೆ ಮೂಡಿಸುತ್ತಿದ್ದರು. ಪ್ರತಿಭಾವಂತ ವಿದ್ಯಾರ್ಥಿಗಳನ್ನು ಗುರ್ತಿಸಿ ಮಾರ್ಗದರ್ಶನ ನೀಡುತ್ತಿದ್ದರು.

ಸರಳತೆಗೆ ಪ್ರತೀಕವಾದ ವ್ಯಕ್ತಿ. ಶ್ರೀ ಮಠದ ಏಳಿಗೆ ಮತ್ತು ಮುನ್ನಡೆ ಬಗ್ಗೆ ಚಿಂತನೆ ಮಾಡುತ್ತಿದ್ದರು. ಶ್ರೀ ಶ್ರೀಗಳವರ ಮೇರು ಸಾಧನೆಯನ್ನು ನೋಡಿ ಹೆಮ್ಮೆ ಪಡುತ್ತಿದ್ದರು. ಶ್ರೀಮಠ ಸಣ್ಣ ಪ್ರಮಾಣದಿಂದ ಬೃಹತ್ ಬೆಳವಣಿಗೆ ಹೊಂದಿದ ಬಗ್ಗೆ ಶ್ರೀ ಶ್ರೀಗಳವರ ನಿರಂತರ ದಣಿವರಿಯದ ಶ್ರಮವನ್ನು ಅನೇಕ ನಿದರ್ಶನಗಳ ಮೂಲಕ ಪ್ರತಿಪಾದಿಸುತ್ತಿದ್ದರು. ಅವರ ಸೇವೆ ಮತ್ತು ನೀಡುತ್ತಿದ್ದ ಸಹಕಾರ ಆದರ್ಶಪ್ರಿಯವಾಗಿದ್ದವು.

ಇಂತಹ ನಿಷ್ಠಾವಂತ ಹಿರಿಯ ಹಿತೈಷಿಯನ್ನು ಕಾಣುವುದು ವಿರಳ. ದಿವಂಗತ ಬಿ. ಹೊನ್ನಪ್ಪನವರ ಆತ್ಮಕ್ಕೆ ಶಾಂತಿಯನ್ನು ನೀಡಲೆಂದು ಬಸವಾದಿ ಪ್ರಮಥರನ್ನು ಹಳೆಯ ವಿದ್ಯಾರ್ಥಿ ಸಂಘ ಮತ್ತು "ಸಿದ್ಧಗಂಗಾ" ಪ್ರಾರ್ಥಿಸುತ್ತದೆ.

**ಶರಣ ಶ್ರೀ ಡಿ ಚಂದ್ರಶೇಖರಯ್ಯ,** ಕಂಟ್ರಾಕ್ಟರ್, ಬೆಂಗಳೂರು. ಸೋಮವಾರ 3 ಜುಲೈ 1995 ಶಿವೈಕ್ಯರಾದರು. ಇವರಿಗೆ 72 ವರ್ಷ ವಯಸ್ಸಾಗಿತ್ತು. ಇವರ ಹುಟ್ಟೂರು ಬೆಂಗಳೂರು ಜಿಲ್ಲೆ, ದೊಡ್ಡಬಳ್ಳಾಪುರ ತಾಲ್ಲೂಕು, ದೊಡ್ಡಬೆಳವಂಗಲ. ಬಾಲ್ಯದಿಂದಲೂ ಸಾಹಸ ಪ್ರವೃತ್ತಿ ಉಳ್ಳವರಾಗಿ ಸಮಾಜ

ಮೇಲೆ ಬಂದರು. ಇವರ ವ್ಯಕ್ತಿತ್ವ ನೇರ ನಡೆ–ನುಡಿಗಳ ಪ್ರತೀಕವಾಗಿತ್ತು.
ಿದ ಕಾರ್ಯಕಲಾಪಗಳನ್ನು ಸಾಧಿಸಲೇಬೇಕೆಂಬ ಛಲ ಉಳ್ಳವರು.

ಪೂಜ್ಯ ಶ್ರೀ ಶ್ರೀಗಳವರಲ್ಲಿ ಇವರಿಗೆ ಅಪಾರ ಭಕ್ತಿ, ನಿಷ್ಠೆ, ಗೌರವ ಇತ್ತು.
ಸಿದ್ಧಗಂಗೆಯಲ್ಲಿ ಮುನ್ನಡೆಯುತ್ತಿರುವ ಬೃಹತ್ ಕಾರ್ಯಚಟುವಕೆಗಳ ಬಗ್ಗೆ
ೇಷವಾದ ಅಭಿಮಾನ ಮತ್ತು ಹೆಮ್ಮೆಯೂ ಇತ್ತು. ಇಲ್ಲಿಯ ಜಗದ್ವಿಖ್ಯಾತ
ಮಾತ್ಮಕ ಚಟುವಟಿಕೆಗಳಿಂದ ಸ್ಫೂರ್ತಿಹೊಂದಿ ಪ್ರಭಾನ್ವಿತರಾದರು. ತತ್ಫಲ
ಗಿ ಶ್ರೀ ಮಠದಲ್ಲಿ ನಡೆಯುವ ವಸ್ತುಪ್ರದರ್ಶನದ ಕಾರ್ಯದರ್ಶಿಯಾಗಿ ಸುಮಾರು
ಟು ವರ್ಷಗಳ ಕಾಲ ಸೇವೆ ಸಲ್ಲಿಸಿದ್ದಾರೆ. ಈ ಬಗ್ಗೆ ಇವರ ಆಕಾಂಕ್ಷೆ ಏನು?
ೀಧಪ್ರದವಾಗಿ ಇಲಾಖೆಯ ಎಲ್ಲಾ ಮಳಿಗೆಗಳು ಭಾಗವಹಿಸಿ ರಚನಾತ್ಮಕ
ನ ತಿಳಿವಳಿಕೆ ನೀಡಬೇಕೆಂಬುದು ಅವರ ಹಂಬಲವಾಗಿತ್ತು. ಈ ದಿಶೆಯಲ್ಲಿ
ಮ್ಮ ಸ್ವಂತ ಕೆಲಸಗಳನ್ನು ಬದಿಗೊತ್ತಿ ಶ್ರಮಿಸಿದ್ದಾರೆ. ಶ್ರೀ ಮಠದ ಶ್ರೇಯಸ್ಸಿ
ಗಿ ದೀರ್ಘವಾಗಿ ಚಿಂತಿಸುತ್ತಿದ್ದರು. ತೆರೆದ ಮನಸ್ಸು ಹೊಂದಿ, ದುಷ್ಟಶಕ್ತಿಗಳ
ದ್ಧ ಧೈರ್ಯವಾಗಿ ಖಂಡಿಸುತ್ತಿದ್ದರು.

ಸಾರ್ವಜನಿಕ ಸೇವಾ ಕ್ಷೇತ್ರದಲ್ಲೂ ತಮ್ಮನ್ನು ತೊಡಗಿಸಿಕೊಂಡಿದ್ದರು.
ದರ್ಜೆ ಕಂಟ್ರಾಕ್ಟರ್ ಆಗಿ, ಬೆಂಗಳೂರು ವೀರಶೈವ ಸಹಕಾರ ಬ್ಯಾಂಕ್, ಸಹಕಾರ
ಸೈಟಿ ಮತ್ತು ಕರ್ನಾಟಕ ವೀರಶೈವ ವಿದ್ಯಾವರ್ಧಕ ನಿಧಿ ಸಂಸ್ಥೆ ಇವುಗಳ ನಿರ್ದೇ
ಾಗಿ ಸೇವೆ ಸಲ್ಲಿಸಿದ್ದಾರೆ.

ಇವರ ಅಗಲಿಕೆಯಿಂದ ನಿಷ್ಠಾವಂತ ಸೇವಾಕರ್ತರನ್ನು ಶ್ರೀಮಠ ಕಳೆದುಕೊಂ
ಾಗಿದೆ. ಇವರ ಆತ್ಮಕ್ಕೆ ಶಾಂತಿ ಮತ್ತು ದುಃಖ ಸಹಿಸುವ ಶಕ್ತಿಯನ್ನು
ಂಬ ವರ್ಗಕ್ಕೆ ನೀಡಲಿ ಎಂದು ಬಸವಾದಿ ಪ್ರಮಥರನ್ನು "ಸಿದ್ಧಗಂಗಾ"
ರ್ಥಿಸುತ್ತದೆ.

---

## ಶ್ರದ್ಧಾಂಜಲಿ

ತ್ತೀಚೆಗೆ ಶಿವೈಕ್ಯರಾದ ತುಮಕೂರು ವೀರಶೈವ ಸಮಾಜದ ಗಣ್ಯರಾದ
ಿ. ಚಿದಾನಂದ್ ಮತ್ತು ಟಿ. ಎಸ್. ರೇಣುಕಾರಾಧ್ಯ ಇಬ್ಬರೂ ವೀರಶೈವ
ಾಜದ ಅಭಿವೃದ್ಧಿಗಾಗಿ ವಿಶೇಷವಾಗಿ ಶ್ರಮಿಸಿದ್ದರು. ವೀರಶೈವ ಬ್ಯಾಂಕ್, ಕಲ್ಯಾಣ
ಟಪದ ಸ್ಥಾಪನೆಗೆ ಕಾರಣಕರ್ತರಾಗಿ ಬ್ಯಾಂಕಿನ ಅಧ್ಯಕ್ಷರಾಗಿ ಕಾರ್ಯದರ್ಶಿಗಳಾಗಿ
ಯನ್ನು ಸಲ್ಲಿಸಿದ್ದಾರೆ.

ಶ್ರೀ ಸಿದ್ಧಗಂಗಾ ಪೂಜ್ಯ ಶ್ರೀ ಶ್ರೀಗಳವರಲ್ಲಿ ಅಚಲವಾದ ಭಕ್ತಿ ಗೌರವ
ನ್ನು ಹೊಂದಿ ಶ್ರೀ ಮಠದ ಎಲ್ಲಾ ಕಾರ್ಯ ಚಟುವಟಿಕೆಗಳಲ್ಲಿ ತುಂಬು ಹೃದಯದ
ಾರ ನೀಡುತ್ತಿದ್ದರು. ಬಸವಾದಿ ಪ್ರಮಥರು ದಿವಂಗತರ ಆತ್ಮಕ್ಕೆ ಶಾಂತಿ ಕರುಣಿಸಿ
ಂಬ ವರ್ಗದವರಿಗೆ ದುಃಖ ಸಹಿಸುವ ಶಕ್ತಿ ನೀಡಲೆಂದು "ಸಿದ್ಧಗಂಗಾ"
ರ್ಥಿಸುತ್ತದೆ.

ತುಮಕೂರಿಗೆ ಬರುವವರಿದ್ದೀರಾ? ಹಾಗಿದ್ದರೆ, ವೈವಿಧ್ಯಮಯ ಊಟ,

ವಸತಿ, ತಿಂಡಿ ತಿನಿಸುಗಳ ನಮ್ಮ ಈ ಸ್ಥಳಗಳು ಸದಾ ನಿಮ್ಮನ್ನು ಸ್ವಾಗತಿಸುತ್ತಿವೆ.

**ಹೋಟೆಲ್**
**ಶ್ರೀ ನಂಜುಂಡೇಶ್ವರ**
ಊಟ, ವಸತಿ ಮತ್ತು
ಉಪಹಾರ ಮಂದಿರ,
ಬಿ.ಹೆಚ್. ರಸ್ತೆ, ತುಮಕೂರು.।
ದೂರವಾಣಿ
**8597, 2373, 2577**







**ಶ್ರೀ ನಂಜುಂಡೇಶ್ವರ**
**ಬೇಕರಿ**
ತುಮಕೂರು ಜಿಲ್ಲೆಯ ಪ್ರಖ್ಯಾತ
ಬೇಕರಿ
ಚಿಕ್ಕಪೇಟೆ ತುಮಕೂರು.।
ದೂರವಾಣಿ : **8077**



**ಶ್ರೀ ನಂಜುಂಡೇಶ್ವರ ರೆಸ್ಟೋರೆಂಟ್**
ತುಮಕೂರಿನಲ್ಲಿ ಉತ್ತರ ಭಾರತದ ಶೈಲಿಯ ಊಟ
ಉಪಹಾರಗಳ ಶ್ರೇಷ್ಠ ದರ್ಜೆಯ ರೆಸ್ಟೋರೆಂಟ್
ಬಿ.ಹೆಚ್. ರಸ್ತೆ, ತುಮಕೂರು.।
ದೂರವಾಣಿ : **2677**

**ಸಿ.ವಿ. ಮಹದೇವಯ್ಯ**
ಮ್ಯಾನೇಜಿಂಗ್ ಪಾರ್ಟನರ್
ಮನೆ ಫೋ. 2477

**ಶ್ರೀ ನಂಜುಂಡೇಶ್ವರ ಸ್ವೀಟ್ಸ್**
ಎಲ್ಲಾ ವಿಧವಾದ ಸಿಹಿ ಮತ್ತು ಖಾರ ತಿಂಡಿ ಹಾಗೂ
ಬೇಕರಿ ತಿನಿಸುಗಳ ನಗರದ ಏಕೈಕ ಸ್ಥಳ
ಅಶೋಕ ರಸ್ತೆ ತುಮಕೂರು.।
ದೂರವಾಣಿ : **2077**

ಸ್ಥಾಪನೆ: 1943 ತಂತಿ: 'ವೀರಶೈವ'

ಕೆ.ಎಸ್.ಟಿ. 73606285 } ದಿ 24-8-62 ಕೇಂದ್ರ ಕಛೇರಿ: { 72866
ಸಿ.ಎಸ್.ಟಿ. 73656288 70204

ಮಿನಿ ಬಜಾರ್: 351114

# ವೀರಶೈವ ಸಹಕಾರ ಸಂಘ ನಿಯಮಿತ

(ಬೆಂಗಳೂರು ನಗರ ಜಿಲ್ಲಾ ಕೇಂದ್ರ ಸಹಕಾರ ಸಗಟು ಮಾರಾಟ ಮಳಿಗೆ)

ಅರ್ಪಣ ಕಾಂಪ್ಲೆಕ್ಸ್, 1 ನೇ ಮಹಡಿ, ಎಸ್. ಸಿ. ರಸ್ತೆ, ಬೆಂಗಳೂರು 560009

ವ್ಯವಹಾರ: ಸ್ವಚ್ಛ, ಗುಣಮಟ್ಟದ ದಿನನಿತದ ಬಳಕೆ ಪದಾರ್ಥಗಳನ್ನು ಕಡಿಮೆ ದರದಲ್ಲಿ ಸಗಟು ಮಾರಾಟ ಶಾಖೆ ಮತ್ತು ಚಿಲ್ಲರೆ ಮಾರಾಟ ಶಾಖೆ ಮೂಲಕ ವಿತರಣೆ. ಗ್ರಾಹಕರ ಮನೆಗಳಿಗೆ ಸರಬರಾಜು ವವಸ್ಥೆ ಮಾಡಲಾಗುವುದು.

1993-94 ನೇ ಸಾಲಿನಲ್ಲಿ ಷೇರು ಬಂಡವಾಳ: ಸದಸ್ಯರಿಂದ ರೂ. 7.08 ಲಕ್ಷ
ಸರ್ಕಾರದಿಂದ ರೂ. 13-42 ಲಕ್ಷ
ಒಟ್ಟು ರೂ. 20.50 ಲಕ್ಷ

1) ಸದಸ್ಯರ ಸಂಖ್ಯೆ : 5803
2) ಸಗಟು ಮತ್ತು ಚಿಲ್ಲರೆ ಮಾರಾಟ : ರೂ. 1800.00 ಲಕ್ಷ
3) ಅಪದ್ಧನ : ರೂ. 12.98 ಲಕ್ಷ
4) ಇತರೆ ನಿಧಿಗಳು : ರೂ. 35.00 ಲಕ್ಷ
5) 1993-94 ರಲ್ಲಿ ನಿವ್ವಳ ಲಾಭ : ರೂ. 05.75 ಲಕ್ಷ
6) ಸದಸರಿಗೆ ಸೌಲಭ್ಯಗಳು :
   ಅ) ಕೊಳ್ಳುವ ಪದಾರ್ಥದ ಮೇಲೆ ಶೇ. 3 ರಿಯಾಯಿತಿ
   ಆ) ಷೇರಿನ ಮೇಲೆ ಶೇ. 9 ಷೇರು ಲಾಭಾಂಶ

ಮಾನ್ಯ ಸದಸ್ಯರು ಮತ್ತು ಗ್ರಾಹಕರ ಅನುಕೂಲಕ್ಕಾಗಿ ಬೆಂಗಳೂರು ನಗರದಲ್ಲಿ 4 ಸಗಟು ಮಾರಾಟ ಮಳಿಗೆಗಳು, 38 ಚಿಲ್ಲರೆ ಮಳಿಗೆಗಳು ಮತ್ತು ವಿಜಯನಗರದ ಬಡಾವಣೆಯಲ್ಲಿ ಒಂದು ಡಿಪಾರ್ಟ್‌ಮೆಂಟಲ್ ಸ್ಟೋರ್ಸ್.

ಕಾರ್ಯಕಾರಿ ಮಂಡಳಿಯ ಸದಸ್ಯರುಗಳು :

1) ಶ್ರೀ ಬಿ. ಎಂ. ಶ್ರೀಕಂಠಸ್ವಾಮಿಯವರು
ಅಧ್ಯಕ್ಷರು
2) ಶ್ರೀ ಜಿ.ತೋಟದಪ್ಪನವರು
ಉಪಾಧ್ಯಕ್ಷರು

–: ನಿರ್ದೇಶಕರು :–

3) ಶ್ರೀ ಬಿ. ಎಸ್. ಪರಮಶಿವಯ್ಯನವರು
4) ಶ್ರೀ ವೈ. ಟಿ. ಮಹದೇವಪ್ಪನವರು
5) ಶ್ರೀ ಬಿ. ಟಿ. ಉಮೇಶ್‌ರವರು
6) ಶ್ರೀ ಬಿ. ಬಸವರಾಜುರವರು
7) ಶ್ರೀ ಎಂ. ಶಿವಪ್ಪನವರು
8) ಶ್ರೀ ಡಿ. ಚಂದ್ರಶೇಖರಯ್ಯನವರು
9) ಶ್ರೀ ಆರ್. ನೀಲಕಂಠಯ್ಯನವರು
10) ಶ್ರೀ ಶಿವಕುಮಾರ್‌ರವರು
11) ಶ್ರೀಮತಿ ಎಸ್. ಗಿರಿಜರವರು
12) ಶ್ರೀಮತಿ ಪ್ರೇಮಸೋಮಸುಂದರ್‌ರವರು
13) ಶ್ರೀಮತಿ ಟಿ. ಕೆಂಪಮ್ಮನವರು M.L.C
ಸ. ನಾ. ಪ್ರತಿನಿಧಿಗಳು
14) ಶ್ರೀ ಡಿ. ಎಂ. ರುದ್ರಪ್ಪನವರು
15) ಶ್ರೀ ಜಿ. ಪುಟ್ಟಗಂಗಯ್ಯನವರು
16) ವ್ಯವಸ್ಥಾಪಕನಿರ್ದೇಶಕರು
ಬಿ.ಡಿ. ಸಿ. ಸಿ. ಬ್ಯಾಂಕ್
17) ಉಪನಿಬಂಧಕರು, ಸಹಕಾರ ಸಂಘಗಳ
ಉಪನಿಬಧಂಕರ ಕಛೇರಿ,
ಬೆಂಗಳೂರು ನಗರ ಜಿಲ್ಲೆ
18) ಶ್ರೀ ಕೆ. ಎನ್. ನರಸಿಂಹಸ್ವಾಮಿಯವರು
ಪ್ರಧಾನ ವ್ಯವಸ್ಥಾಪಕರು



ನಿರ್ಮಾಣದ ಹಂತದಲ್ಲಿರುವ ಏಕಕಾಲದಲ್ಲಿ 3500 ಮಂದಿ
ಕುಳಿತು ಊಟಮಾಡುವ ಸುಸಜ್ಜಿತ ಪ್ರಸಾದನಿಲಯ



ನಿರ್ಮಾಣದ ಹಂತದಲ್ಲಿರುವ ಪೂಜ್ಯ ಶ್ರೀ ಶ್ರೀಗಳವರ
ವಜ್ರ ಮಹೋತ್ಸವ ಸ್ಮಾರಕ ಬೃಹತ್ ವಿದ್ಯಾರ್ಥಿನಿಲಯ

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ – 572104.